# ಸಂದೇಶದ ಕಥೆಗಳು

ಕೃಪೆ

ಶ್ರೀ ವಿಶ್ವೇಶತೀರ್ಥ ಶ್ರೀಪಾದರು

ನಿರೂಪಣೆ

ಶ್ರೀನಿವಾಸ ವರಖೇಡಿ

ಪ್ರಕಾಶನ

ಪರ್ಯಾಯ ಶ್ರೀಪೇಜಾವರ ಅಧೋಕ್ಷಜ ಮಠ,

ಶ್ರೀಕೃಷ್ಣಮಠ, ಉಡುಪಿ.

SANDESHADA KATHEGALU
Collected by : Srinivasa Varakhedi
Published by Paryaya Sri Pejavara Adhokshaja Matha,
Sri Krishna Matha, Udupi-576 101

Copies 1000

Pages vi + 67



First Published April 2001

Price Rs 10/-

Type Settings by
**Poornaprajna Samshodhana Mandiram,**
Poornaprajna Vidyapeetha, Bangalore

Cover Page designed by
**Sri K M. Sheshagiri**

Printed at
**Poornaprajna Mudrana, Bangalore.**

# ಅನುಗ್ರಹ ಸಂದೇಶ

ನಮ್ಮ ಪರ್ಯಾಯದ ಅವಧಿಯಲ್ಲಿ ಸಾಮಾನ್ಯ ಜಿಜ್ಞಾಸುಗಳಿಗೆ ತಲುಪುವ ಅನೇಕ ಕಿರುಹೊತ್ತಿಗೆಗಳನ್ನು ಪ್ರಕಟಿಸಲು ಸಂಕಲ್ಪಿಸಿದ್ದೇವೆ. ಈಗಾಗಲೇ 'ಶ್ರೀ ಕೃಷ್ಣ ಸಂದೇಶ' ಮತ್ತು 'ಉಪನಿಷತ್ ಸಾರಸಂಗ್ರಹ' ಎಂಬ ಎರಡು ಪುಸ್ತಕಗಳು ಪ್ರಕಟವಾಗಿವೆ. ಇದು ಸಣ್ಣ ಕಥೆಗಳ ಸಂಗ್ರಹವಾದ ಮೂರನೆಯ ಕೃತಿ.

ಇದರಲ್ಲಿ ಕೆಲವು ಪೌರಾಣಿಕ ಕಥೆಗಳಿವೆ. ಮತ್ತೆ ಕೆಲವು ಕಟ್ಟು ಕಥೆಗಳಿವೆ. ಆದರ್ಶಗಳನ್ನು ನೇರವಾಗಿ ಹೇಳಿದಾಗ ಸಪ್ಪೆಯಾಗುತ್ತವೆ. ಕಥೆಗಳ ಮೂಲಕ ಹೇಳಿದಾಗ ಮನಸ್ಸಿಗೆ ಹಿಡಿಯುತ್ತವೆ. ಈ ದೃಷ್ಟಿಯಿಂದ ಕಥೆಗಳ ಸಂಗ್ರಹವನ್ನು ಪ್ರಕಟಿಸಲಾಗಿದೆ. ನಮ್ಮ ಶಿಷ್ಯನಾದ ಶ್ರೀನಿವಾಸ ವರಖೇಡಿ ಆಕರ್ಷಕ ಭಾಷೆಯಲ್ಲಿ ಅನೇಕ ಕಥೆಗಳನ್ನು ಸಂಗ್ರಹಿಸಿದ್ದಾನೆ. ಅವನಿಗೆ ಶ್ರೀಕೃಷ್ಣನ ಅನುಗ್ರಹವಾಗಲೆಂದು ಪ್ರಾರ್ಥಿಸುತ್ತೇವೆ.

ಶ್ರೀಕೃಷ್ಣಭಕ್ತರು ಇದನ್ನು ಕೊಂಡುಕೊಂಡು ಓದಿ ತಮ್ಮ ಬದುಕನ್ನು ಸಾರ್ಥಕಗೊಳಿಸಬೇಕಾಗಿ ಆಶಿಸುತ್ತೇವೆ.

**ಶ್ರೀ ವಿಶ್ವೇಶತೀರ್ಥಶ್ರೀಪಾದರು**
ಪರ್ಯಾಯ ಶ್ರೀಪೇಜಾವರ ಮಠ
ಉಡುಪಿ

ದಿನಾಂಕ : 25.3.2001
ವೃಷ ಸಂವತ್ಸರ, ಚೈತ್ರ, ಪ್ರತಿಪತ್

# ಸಂದೇಶದ ಕತೆಗಳು

# ವಿಪತ್ತು ಬೇಡಿದ ಭಕ್ತಿ

ಮಹಾಭಾರತದ ಭೀಕರ ಸಂಗ್ರಾಮ ಮುಗಿದಿತ್ತು ಆ ಧರ್ಮ ಯುದ್ಧದ ಸೂತ್ರಧಾರ ಶ್ರೀಕೃಷ್ಣ ದ್ವಾರಕೆಗೆ ಹೊರಟು ನಿಂತ ಅವನನ್ನು ಬೀಳ್ಕೊಡಲು ಎಲ್ಲಾ ಬಾಂಧವರೊಡನೆ ಪಾಂಡವ ಸೋದರರು ನಿಂತಿದ್ದಾರೆ ಕೃಷ್ಣ ಹಿರಿಯರಿಗೆಲ್ಲ ಸಾಂತ್ವನ ಹೇಳಿ ಅಭಿವಂದಿಸಿದ ರಥವನೇರಿದ

ಉತ್ತರೆ - ಪಾಂಡವರ ಏಕೈಕ ಸೊಸೆ, ಅಭಿಮನ್ಯುವಿನ ಮಡದಿ, ತುಂಬು ಗರ್ಭಿಣಿ - ಓಡೋಡಿ, ಭಯದಿಂದ ಗಡಗಡನೆ ನಡುಗುತ್ತಾ ಬಂದಿದ್ದಾಳೆ ಬೆನ್ನಟ್ಟಿ ಬರುತ್ತಿರುವ ಬ್ರಹ್ಮಾಸ್ತ್ರದ ಉರಿಯಿಂದ ತನ್ನ ಗರ್ಭವನ್ನು ಕಾಪಾಡುವಂತೆ ಭಗವಂತನ ಬಳಿ ಬೇಡಿ ಬಂದಿದ್ದಾಳೆ

''ಹೇ ಜಗದೊಡೆಯ! ಜಗದ್ರಕ್ಷಕ! ದೇವದೇವ! ಮೃತ್ಯು ಬೆನ್ನಟ್ಟಿ ಬಂದ ಈ ಸಮಯದಲ್ಲಿ ನಿನ್ನ ಹೊರತು ನನಗಾರು ರಕ್ಷಕರು? ಗೋವಿಂದ, ನನಗೆ ನನ್ನ ಕಂದಮ್ಮನನ್ನು ಉಳಿಸಿಕೊಡು ನನಗೆ ಏನಾದರೂ ಆಗಲಿ, ಚಿಂತೆಯಿಲ್ಲ ನನ್ನ ಉದರದಲ್ಲಿ ಬೆಳೆಯುತ್ತಿರುವ ನನ್ನ ಕಂದನಿಗೆ ಮಾತ್ರ ಏನೂ ಆಗದಿರಲಿ '' ಅವಳಿಗೆ ಗೊತ್ತು ವೀರಾಧಿವೀರರ ಮಣಿಸಿದ ತನ್ನ ಮಾವಂದಿರಾದ ಪಾಂಡವರೂ ಸಂಪೂರ್ಣ ರಕ್ಷೆ ನೀಡಲಾರರೆಂದು ಬಗೆದೇ ಅವಳು ಶ್ರೀಕೃಷ್ಣ ಪರಮಾತ್ಮನ ಮೊರೆಹೊಕ್ಕಳು

ಆ ತಾಯಿಯ ದೈನ್ಯದ ಕೂಗು ಭಗವಂತನ ಕರುಣಾಮಯ ಹೃದಯಕ್ಕೆ ಮುಟ್ಟಿತು ಶ್ರೀಕೃಷ್ಣ ತನ್ನ ಇನ್ನೊಂದು ರೂಪದಿಂದ ಗರ್ಭದೊಳಗೆ ಪ್ರವೇಶಿಸಿದ ಭಗವಂತನದು ಅಚಿಂತ್ಯ-ಅದ್ಭುತ ಶಕ್ತಿ! ತನ್ನ ಸುದರ್ಶನವನ್ನು ಕೈಯ್ಯಲಿ ಧರಿಸಿ ಅಶ್ವತ್ಥಾಮನ ಬ್ರಹ್ಮಾಸ್ತ್ರವನ್ನು ಮಣಿಸಿದ ಅವಳ ಗರ್ಭವ ಉಳಿಸಿದ ಆರಿಹೋಗುತ್ತಲಿದ್ದ ಕುರುಕುಲದ ಕೊನೆಯ ದೀಪದ ಕುಡಿ ಪರೀಕ್ಷಿತನನ್ನು ಬದುಕಿಸಿದ, ಬೆಳಗಿಸಿದ

ಶ್ರೀಕೃಷ್ಣ ಮತ್ತೆ ಹೊರಟು ನಿಂತ

ಈಗ ಕುಂತಿ ಮುಂದೆ ಬಂದಳು ಕೈಮುಗಿದು ನಿಂತಳು ಅವಳಿಗೆ ಸಂಪೂರ್ಣವಾಗಿ ಅರಿವಾಗಿತ್ತು ಸಂಸಾರದ ಕಷ್ಟ-ಕಾರ್ಪಣ್ಯಗಳಲ್ಲಿ ಬೆಂದು ಪಕ್ವವಾದ ಜೀವ ಭಗವಂತನ ಮಹಿಮೆಯನ್ನು ಕಣ್ಣಾರೆ ಕಂಡಂತಹ ಭಗವದ್‌ಭಕ್ತೆ ಅವಳ ಮುಖದಿಂದ ಭಕ್ತಿತುಂಬಿದ ಸ್ತುತಿ ತಾನೇ ಹೊರಬಂದಿತು

''ಹೇ ಭಕ್ತವತ್ಸಲ! ನೀನು ಮಾಡಿದ ಉಪಕಾರದ ಋಣವನ್ನು ತೀರಿಸಲಾದೀತೆ? ನೀನು ನನ್ನ ಕುಟುಂಬದ ಮೇಲೆ ತೋರಿದ ಪ್ರೀತಿ-ವಾತ್ಸಲ್ಯಗಳನ್ನು ಮರೆಯಲಾದೀತೆ? ಅಂದು ದಾಯಾದಿಗಳು ಹಾಕಿದ ವಿಷದಿಂದ ರಕ್ಷಿಸಿದೆ ಅರಗಿನ ಮನೆಯ ಜಾಲದಿಂದ ಕಾಪಾಡಿದೆ ಅಂದಿನ ದ್ಯೂತದ ಸಭೆಯಲ್ಲಿ ನನ್ನ ಮನೆಯ ಮಾನ ಉಳಿಸಿದೆ ವನವಾಸದ ಕ್ಲೇಶಗಳಲ್ಲಿ ನಿನ್ನ ಅನುಗ್ರಹವೇ ತಾರಕವಾಯಿತು ಕೊನೆಗೆ ಸಂಗ್ರಾಮದಲ್ಲಿ ನನ್ನ ಮಕ್ಕಳೊಂದಿಗೆ ನಿಂತೆ ಮತ್ತೆ ಈಗ ನನ್ನ ವಂಶದ ಕೊನೆಯ ಕುಡಿಯನ್ನು ಉಳಿಸಿ ನನ್ನ ಕುಲವನ್ನೇ ಉದ್ಧರಿಸಿದೆ

ಹೇ ಭಗವಂತ! ನನಗೆ ಗೊತ್ತು ವಿಪತ್ತು ಬಂದಾಗಲೆಲ್ಲ ನೀನು ನಿನ್ನ ಅನುಗ್ರಹದ ದರ್ಶನವಿತ್ತು ರಕ್ಷಣೆ ನೀಡಿರುವೆ ವಿಪತ್ತು ನಿನ್ನ ದರುಶನವ ತಂದುಕೊಡುವ ಸಂಪತ್ತು! ಆದುದರಿಂದ ಭಗವಂತ, ನನಗೆ ಮತ್ತೆ ಮತ್ತೆ ವಿಪತ್ತುಗಳೇ ಎದುರಾಗಲಿ ನಿನ್ನ ದರ್ಶನದ ಲಾಭವಾಗಲಿ ನಿನಗೆ ನಮೋ ನಮಃ''

ಹೀಗೆ ವಿಪತ್ತನ್ನು ಬೇಡಿದ ಕುಂತಿಯ ಈ ಪ್ರಾರ್ಥನೆ ಅಪೂರ್ವ, ಅನನ್ಯಾದೃಶವಾದದ್ದು ಭಗವಂತನ ದಿವ್ಯ ದರ್ಶನಕ್ಕಾಗಿ ಎಂತಹ ಆಪತ್ತನ್ನೂ ಆಹ್ವಾನಿಸುವ, ಬೇಡುವ ಸ್ಥೈರ್ಯ, ಧೈರ್ಯ ಆ ಧೀರ ಮಹಿಳೆಯದು!!

ನಿಜ! ನಮಗೆ ಕುಂತಿಯಂತೆ ಆಪತ್ತನ್ನು ಆಹ್ವಾನಿಸುವ ಎದೆಗಾರಿಕೆ ಇಲ್ಲ

ಆದರೆ ವಿಪತ್ತು ಬಂದಾಗ ಭಗವಂತ ನಮ್ಮನ್ನು ರಕ್ಷಿಸುವನು ಎಂಬ ವಿಶ್ವಾಸವಾದರೂ ನಮಗಿರಬೇಕು

ಭಾಗವತ

# ಪ್ರಹ್ಲಾದ ಕೇಳಿದ ವರ

''ಎಲ್ಲಿದ್ದಾನೆ ಆ ನಿನ್ನ ಭಗವಂತ?''

''ಎಲ್ಲೆಲ್ಲೂ ಇದ್ದಾನೆ''

''ಈ ಕಂಭದಲ್ಲಿ?''

''ಅಲ್ಲಿಯೂ''

''ನೋಡೋಣ! ಅದೂ ಪರೀಕ್ಷೆಯಾಗಲಿ'' ಹಿರಣ್ಯಕಶಿಪು ಕಂಭಕ್ಕೆ ಕಾಲಿನಿಂದ ಒದ್ದ. ನೋಡ ನೋಡುತ್ತಿದ್ದಂತೆ ಕಂಭ ಸೀಳಿತು. ವಿಚಿತ್ರ 'ನರ ಸಿಂಹ'ರೂಪ ಧರಿಸಿ ಭಗವಂತ ಕಾಣಿಸಿಕೊಂಡ. ಹಿರಣ್ಯಕಶಿಪುವನ್ನು ಹಿಡಿದೊಯ್ದು ಸಂಹರಿಸಿದ. ಸಂಹಾರದ ನಂತರವೂ ಭಗವಂತನ ಆ ಉಗ್ರ ರೂಪ ಶಾಂತವಾಗಲಿಲ್ಲ. ದೇವಾನುದೇವತೆಗಳು ಪ್ರಾರ್ಥಿಸಿದರು. ಕೊನೆಗೆ ಪುಟ್ಟ ಮಗು ಪ್ರಹ್ಲಾದನನ್ನು ಮುಂದೆ ಮಾಡಿದರು. ಯಾರಿಗಾಗಿ ಭಗವಂತ ಅವತರಿಸಿದ್ದಾನೋ ಆ ಪ್ರಹ್ಲಾದನನ್ನು ಕಂಡು ಭಗವಂತ ಶಾಂತನಾದ. ಪ್ರಸನ್ನ ನಾಗಿ ಪ್ರಹ್ಲಾದನಿಗೆ ವರ ಕೇಳು ಎಂದ.

ಆ ಪುಟ್ಟ ಬಾಲಕನ ಉತ್ತರವೇನು ಗೊತ್ತೇ?

''ಹೇ ಭಗವಂತ! ವರ ನೀಡುವೆನೆಂದು ಆಮಿಷ ಒಡ್ಡಿ ಮತ್ತೆ ನನ್ನನ್ನು ಈ ಸಂಸಾರದ ಮಾಯಾಜಾಲಕ್ಕೆ ಬೀಳಿಸಬೇಡ! ಈ ವರಗಳಿಗಾಗಿ ನಾ ನಿನ್ನ ಭಕ್ತಿ ಮಾಡಲಿಲ್ಲ. ನಿನ್ನಿಂದ ವರಗಳ ಬಯಸಿ ಭಕ್ತಿ ಮಾಡುವ ಭಕ್ತ ಭಕ್ತನಲ್ಲ, ವ್ಯಾಪಾರಿ! ಆದುದರಿಂದ ನೀ ನನಗೆ ವರ ನೀಡುವುದೇ ಆದರೆ, ಇನ್ನೆಂದೂ ವರ ಬೇಡದಿರುವ. ಬಯಕೆಯ ವರ ನೀಡು, ಇದೇ ನಾನು ನಿನ್ನಲ್ಲಿ ಕೇಳುವ ವರ''

ಇಂದು ದೇವಸ್ಥಾನ ಅಥವಾ ರಾಯರ ಮಠಗಳಿಗೆ ಹೋಗಿ ಪಂಚಾ ಮೃತ - ಅಭಿಷೇಕ - ಸರ್ವಸೇವೆ - ರಥೋತ್ಸವ ಇತ್ಯಾದಿ ಸೇವೆ ಸಲ್ಲಿಸಿ, ಅದಕ್ಕೆ ಪ್ರತಿಯಾಗಿ ನಮ್ಮ ಅಭೀಷ್ಟಗಳ ದೊಡ್ಡ ಪಟ್ಟಿಯನ್ನೇ ದೇವರ ಬಳಿ ಇಡುವ ನಮ್ಮ ಪ್ರವೃತ್ತಿ ವ್ಯಾಪಾರವಲ್ಲದೇ ಮತ್ತೇನು?

ಭಕ್ತ ಪ್ರಹ್ಲಾದನ ಈ ಕೋರಿಕೆ ನಮ್ಮ ಕಣ್ತೆರಸಬೇಕು **-ಭಾಗವತ**

# ಭಗವಂತನನ್ನು ಕಂಡುಬಂದ ಧ್ರುವ

ಧ್ರುವ, ಚಕ್ರವರ್ತಿ ಉತ್ತಾನಪಾದನ ಇಬ್ಬರು ಮಕ್ಕಳಲ್ಲಿ ಹಿರಿಯವ ಉತ್ತಾನಪಾದನಿಗೆ ಇಬ್ಬರು ಸತಿಯರು - ಸುನೀತಿ ಹಾಗೂ ಸುರುಚಿ ಸುರುಚಿಯ ಮಗ ಉತ್ತಮ ಕಿರಿಯ ಸುನೀತಿಯಲ್ಲಿ ಜನಿಸಿದ ಧ್ರುವ ಹಿರಿಯ ಉತ್ತಾನಪಾದನಿಗೆ ಸುರುಚಿ ನೆಚ್ಚಿನ ಮಡದಿ ಅವಳ ಸೌಂದರ್ಯ - ವಿಲಾಸಗಳಿಗೆ ಮರುಳಾದ ಚಕ್ರವರ್ತಿಗೆ ಸುನೀತಿಯತ್ತ ತಾತ್ಸಾರ ಜೊತೆಗೆ ಸುರುಚಿಗೆ ಅಪ್ರಿಯವಾಗುವುದನ್ನು ಮಾಡುವ ಧೈರ್ಯವೂ ರಾಜನಿಗೆ ಇಲ್ಲ ಹೀಗಾಗಿ ಅರಮನೆಯಲ್ಲಿ ಹಿರಿಯಳಾದರೂ ಸುನೀತಿಗೆ ದನಿಯಿಲ್ಲ, ಕಿರಿಯಳಾದರೂ ಸುರುಚಿಯೇ ಎಲ್ಲ! ಇದಕ್ಕೆ ರಾಜನದೂ ಪ್ರತಿ ಮಾತಿಲ್ಲ!

ಒಂದು ದಿನ ನಡೆದ ಘಟನೆಯೊಂದು ಪುಟ್ಟ ಬಾಲಕ ಧ್ರುವನ ದಿಕ್ಕನ್ನೇ ಬದಲಾಯಿಸಿತು ಅವನ ಮನದಲ್ಲಿ ಛಲದ ಬೀಜ ಬಿತ್ತಿತು ಅವನನ್ನು ಭಗವಂತನೆಡೆಗೆ ಕರೆದೊಯ್ಯಿತು

ಆ ದಿನ ಉತ್ತಮ ಅಪ್ಪ ಉತ್ತಾನಪಾದನ ತೊಡೆಯನ್ನೇರಿ ಆಟವಾಡುತ್ತಿದ್ದ ತಂದೆ ಉತ್ತಾನಪಾದ ಅವನನ್ನು ಮುದ್ದು ಮಾಡುವ ದೃಶ್ಯ ಕಂಡಾಗ ಪುಟ್ಟ ಮಗು ಧ್ರುವನಿಗೂ ಆಸೆಯಾಯಿತು ಅವನೂ ತಂದೆಯ ಬಳಿ ಬಂದ ತೊಡೆಯನ್ನೇರಿ ಕುಳಿತುಕೊಳ್ಳಲು ತವಕಿಸಿದ ಉತ್ತಾನಪಾದನಿಗೆ ಧ್ರುವನನ್ನು ಎತ್ತಿಕೊಂಡು ಮುದ್ದಾಡುವ ಧೈರ್ಯವಿಲ್ಲ ಹತ್ತಿರದಲ್ಲೇ ನಿಂತಿದ್ದ ಸುರುಚಿ ಎಲ್ಲಿ ಮುನಿಸಿಕೊಳ್ಳುವಳೋ ಎಂಬ ಭಯ ಅವನಿಗೆ ! ಅವನು ಧ್ರುವನ ಆಸೆಯನ್ನು ಪುರಸ್ಕರಿಸಲಿಲ್ಲ ಧ್ರುವನಿಗೆ ಬೇಸರವಾಯಿತು

ಅಲ್ಲೇ ನಿಂತಿದ್ದ ಚಿಕ್ಕಮ್ಮ ಸುರುಚಿಯ ವ್ಯಂಗ್ಯದ ಮಾತು ಕೇಳಿದ ಮೇಲಂತೂ ಧ್ರುವನ ದುಃಖ ಹೇಳತೀರದು ''ಏಯ್! ಧ್ರುವ! ನನ್ನ ಹೊಟ್ಟೆಯಲ್ಲಿ ಹುಟ್ಟದ ನಿನಗೆ ತಂದೆಯ ತೊಡೆಯೇರುವ ಅರ್ಹತೆಯಿಲ್ಲ ನಿನಗೆ ಒಂದು ವೇಳೆ ಆ ಬಯಕೆ ಇದ್ದರೆ, ಹೋಗು ದೇವರಲ್ಲಿ ಕೇಳು ಮತ್ತೊಮ್ಮೆ ನನ್ನ ಹೊಟ್ಟೆಯಲ್ಲಿ ಹುಟ್ಟಿ ಬಾ ಆಗ ''

ಸುರುಚಿಯ ಈ ಮಾತುಗಳು ಅವನ ಕಿವಿಯಲ್ಲಿ ಗುಂಯ್‌ಗುಡುತ್ತಿದ್ದವು ನೆನೆದಾಗಲೆಲ್ಲ ಧ್ರುವನ ಮುಖ ಕೆಂಪಾಗುತ್ತಿತ್ತು ಕಣ್ಣಿನಲ್ಲಿ ಧಾರಾಕಾರ ನೀರು ಅವಮಾನ ಸಹಿಸಲಾಗದ ಸಿಟ್ಟು, ತನ್ನ ತಾಯಿ ಸುನೀತಿಯ ಬಳಿ ಒಡೋಡಿ ಬಂದ ಅಸಹನೆಯಲ್ಲಿ ಬಿಕ್ಕಿ ಬಿಕ್ಕಿ ಅಳುತ್ತ ನಡೆದ ಕತೆಯನ್ನೆಲ್ಲ ಹೇಳಿದ ಕೇಳಿದ ತಾಯಿ ಸುನೀತಿ ಖಿನ್ನಳಾದಳು ಬಾಡಿದ ಮುಖದಲ್ಲಿ ಮಗುವನ್ನು ಸಂತೈಸುತ್ತ ಹೇಳಿದಳು

''ಮಗು! ನಿನ್ನ ಚಿಕ್ಕಮ್ಮ ಹೇಳಿದ ಮಾತು ಸರಿಯಾಗಿದೆ ನನ್ನಂತಹ ದುರ್ಭಾಗ್ಯವಂತಳ ಹೊಟ್ಟೆಯಲ್ಲಿ ನೀನು ಹುಟ್ಟಿರುವೆ ಆ ನಿನ್ನಪ್ಪ ನನ್ನನ್ನು ತನ್ನ ಮಡದಿಯೆಂದು ಹೇಳಲೇ ನಾಚುವಾಗ, ನಿನ್ನನ್ನು ಮಗನೆಂದು ಒಪ್ಪುವನೇ! ಆದ್ದರಿಂದ ನಿನ್ನ ಸಮಸ್ಯೆಗೆ ಯಾರೂ ಉತ್ತರಿಸಲಾರರು ಹೋಗು ಆ ದೇವ ದೇವ ಭಗವಂತನ ಬಳಿಗೇ ಹೋಗು ಅವನನ್ನೇ ಆಶ್ರಯಿಸು ಅವನ ಬಳಿಯೇ ನಿನ್ನ ಅಭಿಲಾಷೆ ಪೂರೈಸುವದು ಹೋಗು ಆ ದೇವರನ್ನೇ ಆರಾಧಿಸು ಭಜಿಸು''

ತಾಯಿ ಸುನೀತಿಯ ಉತ್ತೇಜನದಿಂದ ಸ್ಫೂರ್ತಿ ಪಡೆದ ಧ್ರುವ ಭಗವಂತನಿಗಾಗಿ ಮನೆ ಬಿಟ್ಟು ಹೊರಟ ಭಗವಂತನನ್ನು ಎಲ್ಲಿ ಅರಸುವದು? ಭಗವಂತನನ್ನು ಕಾಣುವ ಬಗೆ ಹೇಗೆ? ಅವನಿಗೊಂದೂ ಗೊತ್ತಿಲ್ಲ ಆದರೆ, ಮನದಲ್ಲಿ ಭಗವಂತನನ್ನು ಕಾಣುವ ಛಲವಿದೆ ಧೈರ್ಯವಿದೆ ಇಂತಹ ಸ್ಥಿತಿಯಲ್ಲಿ ದಾರಿಯಲ್ಲಿ ನಾರದರು ಧ್ರುವನನ್ನು ಕಂಡರು ಪಾಪ! ಮುಗ್ಧ ಮಗು! ಐದು ವರ್ಷದ ಹಸುಳೆ ಆದರೆ ಅವಮಾನ ಸಹಿಸದ ಕ್ಷಾತ್ರ ತೇಜಸ್ಸು ನಾರದರು ಧ್ರುವನ ಮನದಲ್ಲಿ ಮನೆ ಮಾಡಿದ ಭಗವಂತನಿಗಾಗಿ ತುಡಿತ ಅವನನ್ನು ಕಾಣುವ ಅದಮ್ಯ ಬಯಕೆ ಅವನ ಅನುಗ್ರಹಕ್ಕಾಗಿ ಕಾತರ ತೀವ್ರ ಹಂಬಲವನ್ನು ಅರಿತರು ಆ ಮಗುವಿಗೆ ಮಾರ್ಗದರ್ಶನ ಮಾಡಿದರು

''ಮಗು! ಧ್ರುವ ಭಗವಂತನನ್ನು ಕಾಣಬೇಕೆಂಬ ನಿನ್ನ ಛಲ ಕಂಡು ನನಗೆ ಮೆಚ್ಚಿಗೆಯಾಗಿದೆ ಆದರೆ, ಭಗವಂತನನ್ನು ಕಾಣುವದು ಅಷ್ಟು

ಸುಲಭವಲ್ಲ! ದೇವಾನುದೇವತೆಗಳು, ಋಷಿ-ಮುನಿಗಳು ಆ ದೇವದೇವನ ದರುಶನಕ್ಕಾಗಿ ಜ್ಞಾನ - ಭಕ್ತಿ- ವಿರಕ್ತಪೂರ್ವಕ ಜೀವಿತವಿಡೀ ತಪಗೈಯ್ಯುತ್ತಾರೆ ಆಗಲೂ ಭಗವಂತನ ದರ್ಶನ ಅವರಿಗೆ ದೊರಕದೇ ಹೋಗಿರುವದೂ ಉಂಟು ನೀನಿನ್ನೂ ಪುಟ್ಟಬಾಲಕ ನಿನ್ನ ಉತ್ಸಾಹಕ್ಕೆ ನಾನು ತಣ್ಣೀರು ಎರಚಲಾರೆ ಆದರೆ, ನಿನಗೆ ಭಗವಂತನನ್ನು ತಲುಪಲು ದಾರಿ ತೋರುವೆ ಸಾವಿರಾರು ವರ್ಷಗಳ ತ್ಯಾಗಮಯ ಜೀವನಕ್ಕೂ ಒಲಿಯದ ಭಗವಂತ ಭಕ್ತರ ಒಂದರೆಕ್ಷಣದ ಶರಣಾಗತಿಗೆ ಸೋಲುತ್ತಾನೆ ಒಲಿದು ಅವನೆದುರು ಬಂದಿಳಿಯುತ್ತಾನೆ ಭಕುತಿ ಅವನೊಲುಮೆಯ ಯುಕ್ತಿ, ಅನನ್ಯ ಭಕ್ತಿಯಿಂದ ನೀನು ಎಲ್ಲ ಪ್ರಾಪಂಚಿಕ ವಿಷಯ ತೊರೆದು ತದೇಕಚಿತ್ತನಾಗಿ ''ಓಂ ನಮೋ ಭಗವತೇ ವಾಸುದೇವಾಯ'' ಎಂಬೀ ಮಂತ್ರವನ್ನು ಜಪಿಸು ನಿನಗೆ ಭಗವಂತ ಒಲಿಯುತ್ತಾನೆ''

ನಾರದರ ಉಪದೇಶ ಪಡೆದ ಧ್ರುವ ಯಮುನೆಯ ತೀರ ತಲುಪಿದ ತಪೋವನದಲ್ಲಿ ಅನ್ನ-ನೀರುಗಳನ್ನು ತೊರೆದು ಅನನ್ಯವಾಗಿ ದ್ವಾದಶಾಕ್ಷರ ವಾಸುದೇವ ಮಂತ್ರದಿಂದ ಆ ದೇವನನ್ನು ಧ್ಯಾನಿಸಿದ ದಿನಗಳು ಉರುಳಿದವು, ಮಾಸ ಕಳೆದವು , ಋತುಗಳು ಜಾರಿದವು, ಹೀಗೆ ಆರು ತಿಂಗಳ ಕಾಲದ ದೀರ್ಘ ಸಮಾಧಿಯಲ್ಲಿ ಪುಟ್ಟ ಧ್ರುವ ಲೀನನಾದ ಅವನ ಅಚಲಭಕ್ತಿಗೆ ಭಗವಂತ ಮೆಚ್ಚಿದ ಅವನೆದುರು ಪ್ರತ್ಯಕ್ಷನಾದ ಸಮಾಧಿಯಿಂದ ಎಚ್ಚೆತ್ತ ಧ್ರುವ ತನ್ನ ಕಣ್ಣೆದುರು ನಿಂತ ಅತ್ಯದ್ಭುತ ಭಗವಂತನ ರೂಪ ಕಂಡು ಬೆರಗಾದ ಅವನಿಗೆ ಮಾತೇ ಹೊರಡಲಿಲ್ಲ ವಾಸುದೇವ ರೂಪ ಭಗವಂತ ತನ್ನ ಶಂಖದಿಂದ ಧ್ರುವನ ಕೆನ್ನೆ ತಟ್ಟಿ ಪ್ರೇರಿಸಿದ ಧ್ರುವನ ಮುಖದಿಂದ ಭಗವಂತನ ಸ್ತುತಿ ಹೊರಹೊಮ್ಮಿತು ಭಗವಂತ ಪ್ರೀತನಾದ ಧ್ರುವನ ಅಭೀಷ್ಟದಂತೆ ಅವನೆಲ್ಲ ಇಚ್ಛೆಗಳ ಪೂರೈಸಿದ ಕೊನೆಗೆ ''ಮೂವತ್ತಾರು ಸಹಸ್ರವರ್ಷಗಳ ಧರ್ಮರಾಜ್ಯ ನಿನ್ನದಾಗಲಿ'' ಎಂದೂ ಭಗವಂತ ಅವನನ್ನು ಹರಿಸಿ ಅದೃಶ್ಯನಾದ

ಇತ್ತ ಚಕ್ರವರ್ತಿ ಉತ್ತಾನಪಾದನಿಗೆ ಮಗ ಧ್ರುವ ಮನೆಬಿಟ್ಟು ಹೋದ

ಮೇಲೆ ಚಿಂತೆಯಾಯಿತು ತನ್ನ ಅವಿವೇಕದ ವರ್ತನೆಗೆ ಬೇಸರಪಟ್ಟು ಕೊಂಡ ಅರಮನೆಗೆ ಆಗಮಿಸಿದ ನಾರದರಿಂದ ಧ್ರುವನ ವೃತ್ತಾಂತ ತಿಳಿದ ಅವರೆದುರೂ ತನ್ನ ಪಶ್ಚಾತ್ತಾಪ ತೋಡಿಕೊಂಡ

ಕೊನೆಗೆ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಧ್ರುವ ಮನೆಗೆ ಹಿಂದಿರುಗಿದ ಅವನ ತಂದೆ, ತಾಯಿ, ಚಿಕ್ಕಮ್ಮನೂ ಸಹ ಅವನನ್ನು ಸ್ವಾಗತಿಸಿದರು ಪೌರಜನರೆಲ್ಲ ಅವನನ್ನು ಆದರಿಸಿದರು ಅವನು ತಂದೆಯ ನಂತರ ಸಾಮ್ರಾಜ್ಯ ಪಡೆದ ಕೊನೆಗೆ ಧ್ರುವ ಚಕ್ರವರ್ತಿ ಎನಿಸಿ ಮೆರೆದ

ಇಷ್ಟೆಲ್ಲ ಭೋಗ - ಭಾಗ್ಯ - ಐಶ್ವರ್ಯ ಪಡೆದರೂ, ಧ್ರುವನಿಗೆ ತೃಪ್ತಿಯಿಲ್ಲ ''ಕಲ್ಪವೃಕ್ಷದ ಬಳಿಗೆ ಹೋಗಿ ಹಿಡಿ ಭತ್ತ ಬೇಡಿ ಬಂದಂತಾಯಿತು ಅಯ್ಯೋ! ನನ್ನಂತಹ ನತದೃಷ್ಟನೇ ಇಲ್ಲ ಸಂಸಾರ ಕಳೆದ ಸಾಕ್ಷಾತ್ ಭಗವಂತನೇ ಬಂದು ನಿಂತಾಗ ಮತ್ತೆ ಸಂಸಾರವನ್ನೇ ಬೇಡಿ ಪಡೆದೆ'' ಎಂದು ಕೊರಗಿದ

ಹೀಗೆ ಐದು ವರ್ಷದ ಹಸುಳೆ ಧ್ರುವನ ಅನನ್ಯ ಭಕ್ತಿಗೆ ಭಗವಂತ ಮೆಚ್ಚಿಬಂದ ಭಗವಂತನಿಗೆ ವ್ಯಕ್ತಿ ಮುಖ್ಯವಲ್ಲ, ಭಕ್ತಿ!

ಒಲಿದು ಬಂದ ಭಗವಂತನಿಂದ ಧ್ರುವ 'ಧ್ರುವ' ಪದವಿ ಪಡೆದರೂ, ಅದು 'ಅಧ್ರುವ' (ಅಶಾಶ್ವತ)ವೇ ಆಗಿತ್ತು ಸಾಧನೆಯ ಮಾರ್ಗದಲ್ಲಿ ಮಾದರಿಯಾದ ಧ್ರುವನ ಕತೆಯಲ್ಲಿ ಎಚ್ಚರಿಕೆಯೂ ಅಡಗಿದೆ!

**ಅಹೋ ಬತ ಮಮಾನಾತ್ಮ್ಯಂ ಮಂದಭಾಗ್ಯಸ್ಯ ಪಶ್ಯತ ।**
**ಭವಚ್ಛಿದಃ ಪಾದಮೂಲಂ ಗತ್ವಾಯಾಚೇ ತದಂತವಿತ್ ॥**
**ಭವಚ್ಛಿದಮಾಯಾಚೇಹಂ ಭವಂ ಭಾಗ್ಯವಿವರ್ಜಿತಃ ॥**



# ರಂತಿದೇವನ ವ್ರತ

ಅಂದಿಗೆ ರಂತಿದೇವನ ಉಪವಾಸ ವ್ರತದ ನಲವತ್ತೆಂಟು ದಿನಗಳು ಮುಗಿದಿದ್ದವು ಒಂದು ತೊಟ್ಟು ನೀರೂ ಮುಟ್ಟದ ಕಠಿಣ ಉಪವಾಸ! ವ್ರತದ ಕೊನೆಯಾಗಿ, ಆ ದಿನ ಬೆಳಿಗ್ಗೆ ಪಾರಣೆಯ ಹೊತ್ತು ಪಾರಣೆಗಾಗಿ ಎಲ್ಲ ಅಣಿಯಾಗಿದೆ ನಲವತ್ತೆಂಟು ದಿನಗಳ ದೀರ್ಘ ಉಪವಾಸದ ಆಯಾಸ, ಹಸಿವು-ನೀರಡಿಕೆಗಳ ಸಂಕಟದ ನಡುವೆ ಎಲ್ಲ ಪೂಜಾದಿ ಕಲಾಪ ಮುಗಿಸಿದ ಪರಮಾನ್ನ-ನೀರನ್ನು ಭಗವಂತನಿಗೆ ಅರ್ಪಿಸಿ, ತಾನೂ ಸ್ವೀಕರಿಸಬೇಕೆಂದು ಸಜ್ಜಾದ ಸಮಯಕ್ಕೆ ಸರಿಯಾಗಿ ಬ್ರಾಹ್ಮಣನೋರ್ವ ಅವನ ಬಳಿ ಬಂದ ತುಂಬು ಶ್ರದ್ಧಾ-ಭಕ್ತಿಗಳಿಂದ ರಂತಿದೇವ ಅವನನ್ನು ಸತ್ಕರಿಸಿದ, ಉಣಬಡಿಸಿದ ದಾನ-ದಕ್ಷಿಣೆ ನೀಡಿ ಕಳುಹಿಸಿದ

ನಂತರ ತಾನು ಪಾರಣೆ ಮಾಡಬೇಕೆನ್ನುವಷ್ಟರಲ್ಲಿ ಹಸಿದ ಶೂದ್ರನೋರ್ವ ಅತಿಥಿಯಾಗಿ ಮನೆಗೆ ಬಂದ ಅವನಿಗೂ ಸತ್ಕರಿಸಿ ಅನ್ನ ನೀಡಿದ ರಂತಿದೇವ

ಮತ್ತೆ ಉಳಿದ ಆಹಾರವನ್ನು ಸ್ವೀಕರಿಸುವ ಕ್ಷಣ ಮತ್ತೋರ್ವ ಅತಿಥಿ ಪ್ರತ್ಯಕ್ಷ! ಅವನ ಜೊತೆ ಅವನ ನಾಯಿಗಳ ಪರಿವಾರ ಬೇರೆ!!

''ನನಗೆ, ನನ್ನ ಪರಿವಾರಕ್ಕೆ ತುಂಬ ಹಸಿವಾಗಿದೆ ನಮಗೆಲ್ಲ ಅನ್ನ ನೀಡು'' ಎಂದು ಬೇಡಿದ

ಬೇಡಿ ಬಂದವರಿಗೆ ''ಇಲ್ಲ'' ಎಂಬ ಉತ್ತರ ರಂತಿದೇವನ ಬಳಿ ಇಲ್ಲವೇ ಇಲ್ಲ ಸರಿ! ತನ್ನ ಬಳಿ ಇದ್ದ ಉಳಿದೆಲ್ಲ ಅನ್ನವನ್ನು ಆ ಪರಿವಾರಕ್ಕೆ ನೀಡಿದ

ಕೊನೆಗೆ ರಂತಿದೇವನ ಪಾಲಿಗೆ ಪಾರಣೆಗಾಗಿ ಉಳಿದದ್ದು ನೀರು ಮಾತ್ರ!

ಅಷ್ಟರಲ್ಲಿ ಚಾಂಡಾಲನೋರ್ವ ಬಾಗಿಲಿಗೆ ಬಂದು ನಿಂತ ''ತುಂಬ

ಬಳಲಿದ ನನಗೆ ಹನಿ ನೀರು ಹನಿಸುವವರಿಲ್ಲ. ದಾಹದಲ್ಲಿ ಬೆಂದು ಹೋಗುತ್ತಿರುವೆ. ನೀರ ನೀಡುವೆಯಾ?'' ಕರುಣಾರ್ದ್ರವಾಗಿ ದೈನ್ಯಪೂರ್ವಕ ಬೇಡಿಕೊಂಡ. ಆ ದೈನ್ಯದ ಕೂಗಿಗೆ ರಂತಿದೇವನ ಹೃದಯ ಕರಗಿತು. ಕಾರುಣ್ಯದ ಉದ್ಗಾರ ಹೊರಹೊಮ್ಮಿತು.

''ಅಯ್ಯೋ! ದೇವರೇ! ಈ ಎಲ್ಲ ಜನರ ಕ್ಲೇಶಗಳನ್ನು ನಾ ನೋಡಲಾರೆ. ನನಗೆ ಮುಕ್ತಿ ಬೇಡ ; ಸುಖದ ಸುಪ್ಪತ್ತಿಗೆ ಬೇಡ; ಸ್ವರ್ಗದ ಮೋಜು ಬೇಡ; ಈ ಜಗದೆಲ್ಲ ಜೀವರ ನೋವೆಲ್ಲ ನನಗೆ ಬರಲಿ; ಸಂತಸದ ಬುಗ್ಗೆ ಎಲ್ಲೆಡೆ ಹರಿಯಲಿ''

ರಂತಿದೇವ ದೇಹದಿಂದ ಬಳಲಿದ್ದರೂ, ಅವನ ಬಳಲಿಕೆಗಳು ದೂರವಾದವು. ಆ ಚಾಂಡಾಲನಿಗೆ ತನ್ನ ಪಾರಣೆಯ ನೀರೆಲ್ಲ ನೀಡಿ ''ಕೃಷ್ಣಾರ್ಪಣ'' ಎಂದ. ಧನ್ಯಭಾವ ಅನುಭವಿಸಿದ. ರಂತಿದೇವ ಅಜರಾಮರನಾದ!

ಭಾಗವತ

**ನ ಕಾಮಯೇಽಹಂ ಗತಿಮೀಶ್ವರಾತ್ ಪರಾಂ।**
**ಅಷ್ಟರ್ಧಿಯುಕ್ತಾಮಪುನರ್ಭವಂ ವಾ ॥**
**ಆರ್ತಿಂ ಪ್ರಪದ್ಯೇಽಖಿಲದೇಹಭಾಜಾಂ।**
**ಅಂತಃಸ್ಥಿತೋ ಯೇನ ಭವಂತ್ಯದುಃಖಾಃ ॥**



# ಬಲಿಯ ಬಲಿದಾನ

ಯಜ್ಞಮಂಟಪಕ್ಕೆ ಆ ಪುಟ್ಟ ವಟು ಕಾಲಿಡುತ್ತಿರುವಂತೆಯೇ ಸಾವಿರ ಸೂರ್ಯರ ಬೆಳಕು! ಎಲ್ಲರ ದೃಷ್ಟಿಯೂ ಅವನತ್ತಲೇ! ಆ ವಾಮನ ನಡೆದು ಬರುತ್ತಿದ್ದಂತೆ ತಲೆ ನರೆತ ಹಿರಿಯ ತಲೆಗಳೆಲ್ಲ ತಮಗರಿವಿಲ್ಲದಂತೆ ಎದ್ದುನಿಂತರು ಬಲಿಚಕ್ರವರ್ತಿ ಯಜ್ಞಪೂರೈಸಿ ದಾನ ನೀಡುತ್ತಿದ್ದ ಬ್ರಹ್ಮವರ್ಚಸ್ಸಿನ ಈ ಬ್ರಹ್ಮಚಾರಿಯ ಕಂಡು ಅವನೂ ಸಂತಸಗೊಂಡ ಆಸನ ಅರ್ಘ್ಯ, ಪಾದ್ಯ ನೀಡಿ ಆದರಿಸಿದ

''ಹೇ ಬ್ರಾಹ್ಮಣವಟೋ ನಿನ್ನ ಆಗಮನದಿಂದ ನನ್ನ ಯಜ್ಞ ಪೂರ್ಣವಾಯಿತು, ಸಾರ್ಥಕವಾಯಿತು ಹೇಳು ಈಗ ನಾನು ದಾನ ಕಾರ್ಯ ನಡೆಸುತ್ತಿರುವೆ ನಿನಗೇನು ಬೇಕು ಹೇಳು ಅದನ್ನು ನೀಡುತ್ತೇನೆ''

ಬಲಿಯ ಈ ಮಾತಿಗೆ ಉತ್ತರವಾಗಿ

''ರಾಜನ್! ನಾನು ಬ್ರಹ್ಮಚಾರಿ ನನಗೆ ಬೇಕಾದುದು ಬಹಳ ಅತ್ಯಲ್ಪ ನನಗೆ ತಪಗೈಯ್ಯಲು ಮೂರು ಹೆಜ್ಜೆಗಳ ಅಳತೆಯ ಭೂಮಿ ನೀಡು ಹೆಚ್ಚು ಬೇಡ'' ವಾಮನ ಹೇಳಿದ

ರಾಜನಿಗೆ ಅಚ್ಚರಿ!

''ನಿನಗೆ ನನ್ನ ಸಂಪತ್ತಿನ ಅಳತೆಯ ಅರಿವಿಲ್ಲವೆಂದು ತೋರುತ್ತದೆ ನಾನು ಈ ಮೂಲೋಕಗಳ ಒಡೆಯ ನನ್ನ ಬಳಿ ಬಂದು ಮೂರು ಹೆಜ್ಜೆಗಳ ಭೂಮಿ ಬೇಡುವುದೇ? ಇನ್ನೊಮ್ಮೆ ವಿಚಾರ ಮಾಡು'' ಬಲಿ ಆಗ್ರಹಿಸಿದ

''ರಾಜನ್! ನಿನ್ನಲ್ಲಿ ಎಷ್ಟಿದ್ದರೆ ನನಗೇನು? ನನಗೆ ಬೇಕಾದುದು ಮೂರು ಹೆಜ್ಜೆಗಳ ಅವಕಾಶ ಹೆಚ್ಚಿನ ಆಸೆಪಟ್ಟರೆ, ಆಸೆಗೆ ಕೊನೆಯುಂಟೆ? ಆದುದರಿಂದ ನನಗೆ ಮೂರು ಹೆಜ್ಜೆಗಳ ಭೂಮಿಯೇ ಸಾಕು ''

ಇದನ್ನೆಲ್ಲ ದೂರದಿಂದ ಗಮನಿಸುತ್ತಿದ್ದ ದೈತ್ಯರ ರಾಜಗುರು

ಶುಕ್ರಾಚಾರ್ಯರು ಓಡೋಡಿ ಬಂದರು ರಾಜನನ್ನು ಕರೆದು ಗುಟ್ಟಾಗಿ ಈ ವಾಮನ ವಟುವಿನ ಈ ಬೇಡಿಕೆಯ ಹಿಂದೆ ಏನೋ ಸಂಚಿದೆ! ಈ ಬೇಡಿಕೆಯನ್ನು ಪುರಸ್ಕರಿಸಬೇಡ ಮಾತು ತಪ್ಪಿದರೂ ಚಿಂತೆಯಿಲ್ಲ ಬದುಕು ಮುಖ್ಯ ಈ ವಟುವಿನ ಬಣ್ಣದ ಮಾತಿಗೆ ಬಲಿಯಾಗಿ ಮೋಸಹೋಗದಿರು ಎಂದೆಲ್ಲ ಉಪದೇಶಿಸಿದರು ಯಾವುದಕ್ಕೂ ಬಲಿ ಕಿವಿಕೊಡಲಿಲ್ಲ ತಾನು ನೀಡಿದ ಮಾತಿಗೆ ಬದ್ಧನಾದ ಮಾತಿನಂತೆ ದಾನ ನೀಡಲು ಸಿದ್ಧನಾದ ಮೂರು ಹೆಜ್ಜೆಗಳ ಭೂಮಿಯನ್ನು ದಾನ ನೀಡಿ ''ಕೃಷ್ಣಾರ್ಪಣ'' ಎಂದ

ಯಜ್ಞಮಂಟಪದ ಎದುರು ಪುಟ್ಟ ಆಸನದಲ್ಲಿ ಕುಳಿತಿದ್ದ ವಾಮನಾಕಾರದ ವಟು ಎದ್ದು ನಿಂತ ನೋಡ ನೋಡುತ್ತಿದ್ದಂತೆಯೇ ತ್ರಿವಿಕ್ರಮರೂಪಿಯಾಗಿ ಬೆಳೆದು ನಿಂತ ಆಕಾಶವೆಲ್ಲ ವ್ಯಾಪಿಸಿ ಬೆಳೆದು ನಿಂತ ಆ ರೂಪ ಕಂಡು ನೆರೆದ ಜನರೆಲ್ಲ ಬೆರಗಾಗಿ ನಿಂತರು ತ್ರಿವಿಕ್ರಮರೂಪದ ಭಗವಂತ ಹೆಜ್ಜೆಯೊಂದರಿಂದ ಭೂಲೋಕವನ್ನಿಡೀ ಅಳೆದ ಇನ್ನೊಂದು ಹೆಜ್ಜೆಯಿಂದ ದ್ಯುಲೋಕನ್ನೂ ವ್ಯಾಪಿಸಿದ ಬಲಿಚಕ್ರವರ್ತಿಯ ಸಾಮ್ರಾಜ್ಯದ ವ್ಯಾಪ್ತಿ ಮುಗಿದೇ ಹೋಯಿತು!

''ಹೇ ಬಲೀಂದ್ರ! ಎಲ್ಲಿಡಲಿ ನನ್ನ ಮೂರನೇ ಹೆಜ್ಜೆ?''

ಬಲಿ ಯೋಚಿಸಲಿಲ್ಲ ತನ್ನ ತಲೆ ತಗ್ಗಿಸಿ ಕೈಮುಗಿದು ನಿಂತ ಭಗವಂತನ ಪಾದದಲ್ಲಿ ತನ್ನ ಸರ್ವಸ್ವ ಸಮರ್ಪಿಸಿ ತನ್ನನ್ನು ಅರ್ಪಿಸಿಕೊಂಡ

ತ್ರಿವಿಕ್ರಮ ಇನ್ನೊಂದು ಹೆಜ್ಜೆಯನ್ನು ಬಲಿಚಕ್ರವರ್ತಿಯ ಶಿರಸ್ಸಿನ ಮೇಲಿರಿಸಿ, ಅವನನ್ನು ಪಾತಾಳಕ್ಕೆ ಒತ್ತಿ ಅವನ ಚಕ್ರಾಧಿಪತ್ಯ ಕಿತ್ತುಕೊಂಡ! ಆದರೆ ಅವನ ಅನನ್ಯ ಭಕ್ತಿಗೆ ಮೆಚ್ಚಿ ಅವನಿಗೆ ಪಾತಾಳಲೋಕ ಆಧಿಪತ್ಯ ನೀಡಿ ತಾನು ಅವನ ಮನೆಯ ಬಾಗಿಲು ಕಾಯ್ದ

ಇದು ಬಲಿಯ ಕತೆ ಬಲಿಚಕ್ರವರ್ತಿಯ ಬಲಿದಾನದ ಕತೆ ವಾಮನರೂಪದ ಭಗವಂತ ಇಂದ್ರನಿಗಾಗಿ ಬಲಿಯನ್ನು ಕೆಳಕ್ಕೆ ಒತ್ತಿದರೂ, ಬಲಿಯ ಆತ್ಮಸಮರ್ಪಣೆಯ ಭಕ್ತಿಗೆ ಮೆಚ್ಚಿ ಅವನನ್ನು ಮೇಲಕ್ಕೆ ಎತ್ತಿದ!

ಭಾಗವತ

# ಅವಧೂತ ಕಥಾ

ಮತ್ತೆ ಮೇನೆ ತುಳುಕಾಡತೊಡಗಿದಾಗ ರಹೂಗಣನಿಗೆ ಸ್ವಲ್ಪ ಸಿಟ್ಟು ಬಂತು ಕೆಳಗೆ ಬಗ್ಗಿ ಆ ಯುವಕನತ್ತ ನೋಡಿದ ದಷ್ಟಪುಷ್ಟ ಶರೀರದ ಯುವಕ ಹದವಾದ ಮೈಕಟ್ಟು ಮುಖದಲ್ಲಿ ಭಯವಿದ್ದಂತೆ ಇರಲಿಲ್ಲ ಎತ್ತಲೋ ಮನಸ್ಸು ! ರಾಜನಿಗೆ ಸ್ವಲ್ಪ ಹೆಚ್ಚೇ ಸಿಟ್ಟು ಬಂತು ಒಮ್ಮೆ ಹೇಳಿದರೂ, ಮತ್ತೆ ಅದೇ ತಪ್ಪೆಸುಗುತ್ತಿರುವ ಈತನಿಗೆ ತಾನಾರೆಂಬುದು ತಿಳಿದಂತಿಲ್ಲ ಎಂದೆನಿಸಿತು ಗಟ್ಟಿಯಾಗಿ ಗುಡುಗಿದ

''ಏಯ್! ಹುಡುಗ! ನಾನಾರೆಂದು ತಿಳಿದಿರುವೆ ಈ ದೇಶದ ಒಡೆಯ ನನ್ನ ಮಾತು ಕಡೆಗಣಿಸುವಷ್ಟು ಧೈರ್ಯವೇ ನಿನಗೆ? ನಿನ್ನ ಉನ್ಮತ್ತತೆಗೆ ತಕ್ಕ ಚಿಕಿತ್ಸೆ ಮಾಡಿದರೆ ನೀನು ಸರಿಹೋಗುವೆಯೆಂದು ತೋರುತ್ತದೆ !''

ಈ ಮೊದಲೊಮ್ಮೆ ಮೇನೆ ಕುಲುಕಿದಾಗ ಒಳಗೆ ಕುಳಿತು ಪಯಣಿಸುತ್ತಿದ್ದ ರಹೂಗಣ ಮಹಾರಾಜ ಆ ಯುವಕನನ್ನು ಸ್ವಲ್ಪ ಛೇಡಿಸಿದ್ದ! ಮೂದಲಿಸಿದ್ದ! ಆಗಲೂ ತರುಣನ ಮುಖದಲ್ಲಿ ನಿರ್ವಿಕಾರ ಭಾವ ಈಗಲೂ ಅಷ್ಟೆ!!

ರಹೂಗಣ ಸಿಂಧುಸೌವೀರದೇಶದ ಮಹಾರಾಜ ಒಮ್ಮೆ ದೇಶಪರ್ಯಟನೆಗೆ ಹೋದ ಅವನ ಮೇನೆಯನ್ನು ಹೊರಲು ಒಬ್ಬ ವ್ಯಕ್ತಿಯ ಕೊರತೆ ಬಿತ್ತು ವ್ಯವಸ್ಥಾಪಕರು ಅತ್ತಿತ್ತ ಒಬ್ಬ ಸಮರ್ಥ ತರುಣನಿಗಾಗಿ ಅಲೆದರು ದಾರಿಯಲ್ಲಿ ಎತ್ತಲೋ ನೋಡುತ್ತ ತಿರುಗುತ್ತಿದ್ದ ಬ್ರಾಹ್ಮಣ ತರುಣನೋರ್ವ ಅವರ ಕಣ್ಣಿಗೆ ಬಿದ್ದ ಆ ತರುಣ ಕೊಬ್ಬಿದ ಗೂಳಿಯಂತೆ ಇದ್ದ ಅವನಿಗೆ ರಾಜನ ಮೇನೆ ಹೊರಲು ಆದೇಶಿಸಲಾಯಿತು ಆ ಯುವಬ್ರಾಹ್ಮಣ ಶಿಬಿಕೆಯನ್ನು ಹೊತ್ತು ನಡೆಯತೊಡಗಿದ

ಹತ್ತು ಹೆಜ್ಜೆ ಸಾಗಿರಲಿಲ್ಲ ಮೇನೆ ಅತ್ತಿತ್ತ ಓಲಾಡತೊಡಗಿತು ಒಳಗೆ ಕುಳಿತು ಪಯಣಿಸುತ್ತಿದ್ದ ರಾಜಾ ರಹೂಗಣನಿಗೆ ಕಿರಿಕಿರಿಯಾಯಿತು ತನ್ನ ಭಟರಿಗೆ ಕೂಗಿ ಸರಿಯಾಗಿ ನಡೆಯಲು ಹೇಳಿದ

ರಾಜಭಟರು ರಾಜನಲ್ಲಿ ವಿನಮ್ರವಾಗಿ ವಿನಂತಿಸಿಕೊಂಡರು

''ರಾಜನ್, ಇದರಲ್ಲಿ ನಮ್ಮ ತಪ್ಪೇನೂ ಇಲ್ಲ ಈ ದಿನ ಮೇನೆಯ ಒಂದೆಡೆಯ ಭಾಗ ಹೊರಲು ಹೊಸಬನೊಬ್ಬನನ್ನು ನಿಯಮಿಸಲಾಗಿದೆ ನಮ್ಮ ನಡೆಗೆ ಈ ಹೊಸಬ ಹೊಂದಿಕೊಳ್ಳುತ್ತಿಲ್ಲ ಇವನ ಜೊತೆ ನಮಗೆ ಮೇನೆ ಹೊರುವುದೇ ಕಷ್ಟವಾತ್ತಿದೆ'' ಎಂದರು

ರಹೂಗಣ ರಾಜ ಆ ತರುಣನತ್ತ ಬಗ್ಗಿ ನೋಡಿ ಅವನನ್ನು ಮೂದಲಿಸಿದ ''ಅಯ್ಯೋ ಪಾಪ! ತಮ್ಮ! ತುಂಬ ದಣಿವಾಗಿರಬೇಕು ನಿನಗೆ! ಅಲ್ಲವೆ? ತುಂಬ ದೂರದಿಂದ ಮೇನೆಯನ್ನು ಒಬ್ಬನೇ ಹೊತ್ತಿರುವೆ ನೋಡು! ಪಾಪ! ವಯಸ್ಸಾಗಿದೆ ಬೇರೆ!'' ಎಂದೆಲ್ಲ ವ್ಯಂಗ್ಯವಾಡಿದ ಆ ತರುಣ ತಲೆಗೆ ಹಚ್ಚಿಕೊಂಡಂತೆ ತೋರಲಿಲ್ಲ ಇಷ್ಟೆಲ್ಲ ಹೇಳಿದಾಗಲೂ ಮತ್ತದೇ ರೀತಿ ನಡೆದಾಗ ರಾಜನ ಸಹನೆ ಮೀರಿತ್ತು ಸ್ವಲ್ಪ ಕಟುವಾಗಿಯೇ ನುಡಿದಿದ್ದ ಆಗಲೂ ಆ ತರುಣನ ಮುಖದಲ್ಲಿ ಯಾವ ಭಾವವೂ ತೋರಲಿಲ್ಲ ಈ ಬಾರಿ ಅದೇಕೋ ಸ್ವಲ್ಪ ಬಾಯ್ದೆರೆದ ಆ ತರುಣ

''ಹೇ ರಾಜನ್! ನೀನು ಹೇಳಿದುದೆಲ್ಲ ಸರಿಯೇ! ಆದರೆ! ಈ ಮಾತೆಲ್ಲ ಯಾರಿಗೆ ಹೇಳುತ್ತಿರುವೆ? ಯಾರಿಲ್ಲಿ ಒಡೆಯ? ಯಾರು ಸೇವಕ? ಯಾರು ಹೊರುವವರು? ಯಾವ ಭಾರ? ನನಗೊಂದೂ ತಿಳಿಯುತ್ತಿಲ್ಲ ನಿರ್ವಿಕಾರ ಭಾವ ಹೊಂದಿರುವ ನನಗೆ ಯಾವ ಚಿಕಿತ್ಸೆ ನೀ ಮಾಡುವೆ? ಅದರಿಂದಾಗುವ ಪ್ರಯೋಜನವಾದರೂ ಏನು? '' ಎಂದೆಲ್ಲ ಆ ತರುಣ ಹೇಳುತ್ತಲೇ ಇದ್ದ

ರಹೂಗಣ ವಿದ್ವಾಂಸ ಬ್ರಹ್ಮಜ್ಞಾನಿಗಳನ್ನು ಕಂಡವ ಅವನಿಗೆ ಗೊತ್ತು ಅವಧೂತರ ಪರಿ ಈ ಮಾತನೆಲ್ಲ ಕೇಳಿದ ರಹೂಗಣ ಹೌಹಾರಿದ ಮೇನೆಯಿಂದ ತಕ್ಷಣ ಕೆಳಕ್ಕೆ ಹಾರಿದ ಆ ತರುಣ ಬ್ರಾಹ್ಮಣನ ಪಾದಗಳಿಗೆ ಎರಗಿದ ಕ್ಷಮೆ ಬೇಡಿದ ತನ್ನ ರಾಜತ್ವ ಮರೆತ, ಕೈಮುಗಿದು ನಿಂತ

''ಹೇ ಬ್ರಹ್ಮನ್, ಯಾರು ನೀನು? ಈ ಬ್ರಾಹ್ಮಣ ವೇಷದಲ್ಲಿ ಅಲೆಯುತ್ತಿರುವ ನಿನ್ನ ನಿಜ ಸ್ವರೂಪವೇನು? ನಿನ್ನ ಗಂಭೀರವಾದ ಸೂತ್ರಪ್ರಾಯ ಮಾತಿನ ಆಂತರ್ಯ ನನ್ನಂತಹ ಪಾಮರರಿಗೆ ಹೇಗೆ ತಿಳಿಯಲು ಸಾಧ್ಯ? ಆದ್ದರಿಂದ, ತಾವು ನಿಮ್ಮ ಒಗಟು ಮಾತನ್ನು ಬಿಡಿಸಿ

ಮಾತನಾಡಬೇಕು ಅನುಗ್ರಹಿಸಬೇಕು ನನ್ನ ಮೇಲೆ ಕೃಪೆ ಮಾಡಬೇಕು'' ಎಂದೆಲ್ಲ ಪರಿಪರಿಯಾಗಿ ಪ್ರಾರ್ಥಿಸಿದ ರಹೂಗಣ

ಆ ಅವಧೂತರಿಗೆ ದಯೆ ಮೂಡಿತು

''ರಹೂಗಣ, ಯಾರು ಈ ಮೇನೆಯ ಭಾರ ಹೊತ್ತವರು? ಮೇನೆ ಬೆತ್ತದ ಮೇಲಿದೆ ಬೆತ್ತ ಹೆಗಲ ಮೇಲೆ ಹೆಗಲು ಎದೆಯ ಮೇಲೆ ಎದೆ ಉದರದ ಮೇಲೆ ಉದರ ತೊಡೆಗಳ ಮೇಲೆ ತೊಡೆಯ ಭಾರ ಮೊಣಕಾಲ ಮೇಲೆ ಕಾಲು ನೆಲದ ಮೇಲೆ ಆ ನೆಲ ಹೀಗೆ ಈ ಎಲ್ಲ ಭಾರ ಹೊತ್ತವನು ಯಾರು? ಆ ಭಗವಂತ ಮಾತ್ರ ಈ ದೇಹ, ಅದರಲ್ಲಿ ನನ್ನದೆಂದು ಅಂಟಿಕೊಂಡ ಜೀವ, ಇದೆಲ್ಲ ನಿಮಿತ್ತ ಮಾತ್ರ ಜೀವನಿಗೆ ಯಾವ ವಿಧವಾದ ಸ್ವಾತಂತ್ರ್ಯವೂ ಇಲ್ಲ! ಬರೀ ಮಿಥ್ಯಾಭಿಮಾನ! ನಾನು ನನ್ನದೆಂಬ ಬಿಗುಮಾನ! ಇದೇ ಈ ಸಂಸಾರದ ಮೂಲ ನಾನು ಭರತ ಈ ಮೊದಲು ಅನೇಕ ಜನ್ಮಗಳನ್ನೆತ್ತಿ ಈಗ ಈ ಶರೀರದಲ್ಲಿರುವೆ ಇದೆಲ್ಲ ಮಾಯೆಯೆಂದು ನನಗೆ ತಿಳಿದಿದೆ ಹೀಗಾಗಿ ನೀನು ಹೇಳಿದ ಯಾವ ಮಾತೂ ನನ್ನಲ್ಲಿ ಉದ್ವೇಗ ಉಂಟು ಮಾಡಲಿಲ್ಲ ನೋಡು ರಹೂಗಣ, ನಿನಗೂ ಈ ಸಂಸಾರದಿಂದ ಮುಕ್ತಿಯ ಬಯಕೆ ಇದ್ದರೆ, ಈ ಎಲ್ಲ ಅಭಿಮಾನಗಳನ್ನು ತೊರೆದು ಸ್ವತಂತ್ರನಾದ ಭಗವಂತನನ್ನು ಶರಣುಹೊಂದು'' ಎಂದೆಲ್ಲ ತನ್ನ ಪೂರ್ವಜನ್ಮ ವೃತ್ತಾಂತಗಳನ್ನೆಲ್ಲ ತಿಳಿಸಿ ಉಪದೇಶಿಸಿದ

ರಹೂಗಣ ಅವಧೂತ ಭರತರಿಂದ ಬ್ರಹ್ಮಜ್ಞಾನ ಪಡೆದು ಕೃತಾರ್ಥನಾದ

''ಯಾವ ಹುತ್ತದಲ್ಲಿ ಯಾವ ಹಾವೋ?'' ಎಂಬಂತೆ ನಮಗೆ ಯಾವ ರೂಪದಲ್ಲಿ ಜ್ಞಾನಿಗಳು ಇರುವರು ಎಂಬುದು ತಿಳಿಯಲಾರದು ಆದುದ ರಿಂದ ಎಲ್ಲರ ಜೊತೆ ಸೌಜನ್ಯ - ಪ್ರೇಮದಿಂದ ವ್ಯವಹಿಸುವುದನ್ನು ಕಲಿಯಬೇಕು

ಭಾಗವತ

''ನಮೋ ಮಹದ್ಭ್ಯೋಽಸ್ತು ನಮಃ ಶಿಶುಭ್ಯೋ ನಮೋ ಯುವಭ್ಯೋ
ನಮ ಆ ವಟುಭ್ಯಃ!!''

# ಗುರಿ

''ಅದೋ! ಆ ಮರದ ತುದಿಯಲ್ಲಿ ತೂಗುಬಿಟ್ಟಿರುವ ಹಕ್ಕಿಯ ಬೊಂಬೆಯ ಕಣ್ಣಿಗೆ ಗುರಿಯಿಟ್ಟು ನಿನ್ನ ಬಾಣ ಬಿಡು.''

ಶಿಷ್ಯ ಬಿಲ್ಲ ಹೆದೆಯೇರಿಸಿ ಗುರಿಯಿಟ್ಟು ನಿಂತ.

''ಒಂದು ನಿಮಿಷ... ಅಲ್ಲಿ ನಿನಗೇನು ತೋರುತ್ತಿದೆ? ಹೇಳು''

''ಗುರುಗಳೇ, ಆ ಮರ, ಅದರ ಕೊಂಬೆಗಳು... ಎಲೆಗಳು... ಕಾಯಿಗಳು... ಮತ್ತೆ...''

''ಸಾಕು...ನೀನು ಬಿಲ್ಲು ಬಾಣ ಕೆಳಕ್ಕೆ ಇರಿಸಿ. ಹಿಂದೆ ಬಾ... ನಿನ್ನ ಪರೀಕ್ಷೆ ಮುಗಿಯಿತು.''

ಹೀಗೆ ದ್ರೋಣಾಚಾರ್ಯರ ವಿದ್ಯಾಲಯದಲ್ಲಿ ಶಿಷ್ಯರ ಧನುರ್ವಿದ್ಯಾಪ್ರಾವೀಣ್ಯದ ಪರೀಕ್ಷೆ ನಡೆದಿತ್ತು. ಪ್ರತಿಯೊಬ್ಬ ಶಿಷ್ಯನೂ ಹೆಚ್ಚು ಕಡಿಮೆ ಇದೇ ತೆರನಾದ ಉತ್ತರ ಹೇಳುತ್ತಿದ್ದ. ಪರೀಕ್ಷೆ ಅಲ್ಲಿಗೆ ಮುಗಿಯುತ್ತಿತ್ತು.

ಅರ್ಜುನನ ಸರದಿ ಬಂದಿತು.

ಗುರುಗಳು ಎಲ್ಲರಿಗೂ ಕೇಳಿದ ಪ್ರಶ್ನೆಯನ್ನೇ ಕೇಳಿದರು.

''ಅರ್ಜುನ! ಅಲ್ಲಿ ನಿನಗೇನು ತೋರುತ್ತಿದೆ?''

''ಹಕ್ಕಿಯ ಕಣ್ಣು!'' ನೇರವಾದ ದೃಢವಾದ ಉತ್ತರ.

ಅರ್ಜುನ ತನ್ನ ಗುರಿಯತ್ತ ನೆಟ್ಟ ನೋಟ ಕದಲಿಸದೇ ಉತ್ತರಿಸಿದ. ಅರ್ಜುನ ದ್ರೋಣರ ಮೊಗದಲ್ಲಿ ಮೆಚ್ಚಿಗೆಯ ನೋಟ. 'ಬಾಣ ಬಿಡು' ಎಂದು ಗುರುಗಳ ಮಾತು ಹೊರಬಂದಿದ್ದೇ ತಡ, ಹಕ್ಕಿಯ ಗೊಂಬೆಯ ಕಣ್ಣಲ್ಲಿ ಬಾಣ ನೆಟ್ಟಿತ್ತು. ಅರ್ಜುನ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಗುರುಗಳ ನೆಚ್ಚಿನ ಶಿಷ್ಯನಾದ.

ಆಧ್ಯಾತ್ಮದ ಸಾಧನೆಯಲ್ಲಿಯೂ ನಾವೂ 'ಅರ್ಜುನ'ರಾಗಬೇಕು. ಆಧ್ಯಾತ್ಮದ ದಾರಿಯಲ್ಲಿ ಭಗವಂತನೇ ನಮ್ಮ ಗುರಿ. ಮನಸ್ಸು ಬಾಣ. ಮನಸ್ಸೆಂಬ ಬಾಣವನ್ನು ಭಗವಂತನ ಬಳಿ ಚಿಮ್ಮಿಸುವ ಬಿಲ್ಲು 'ವೇದ'. ಆದರೆ, ಇಂತಹ ವೇದವೆಂಬ ಬಿಲ್ಲು ಹಿಡಿದು, ಅದರಲ್ಲಿ 'ಮನ'ವೆಂಬ ಬಾಣ ಹೂಡಿ, ಅಂತರ್ಯಾಮಿಯಾದ 'ಭಗವಂತ'ನತ್ತ ಗುರಿಯಿಟ್ಟು ಹೊಡೆಯುವ ಗುರಿಕಾರನಿಗೆ ಗುರಿಯ ಹೊರತು ಬೇರೊಂದು ಲಕ್ಷ್ಯದಲ್ಲಿರಬಾರದು.

- ಮಹಾಭಾರತ

"ಪ್ರಣಮೋ ಧನುಃ ಶರೋ ಹ್ಯಾತ್ಮಾ
ಬ್ರಹ್ಮತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ
ಶರವತ್ತನ್ಮಯೋ ಭವೇತ್" ॥

- ಉಪನಿಷತ್

ಪ್ರಣವವೇ ಬಿಲ್ಲು ; ಮನವೇ ಬಾಣ ; ಬ್ರಹ್ಮತತ್ವವೇ ಗುರಿ. ಗುರಿತಪ್ಪದೇ ಬಾಣ ಬಿಡಬೇಕು. ಬಾಣದಂತೆ ಗುರಿ ಸೇರಬೇಕು.



# ಹಾಲಿನ ಸವಿ

ಆಗಿನ್ನೂ ಅಶ್ವತ್ಥಾಮ ಸಣ್ಣ ಮಗು ಆಚಾರ್ಯ ದ್ರೋಣರಿಗೆ ನೆಲೆಯೊಂದು ದೊರಕಿರಲಿಲ್ಲ ಮನೆಯಲ್ಲಿ ಬಡತನ ಮಗುವಿಗೆ ಹಸುವಿನ 'ಹಾಲು' ಕೊಡುವಷ್ಟೂ ಸಾಮರ್ಥ್ಯವಿಲ್ಲ ಅಶ್ವತ್ಥಾಮನಿಗೋ ಹಾಲು ಕುಡಿಯಬೇಕೆಂಬಾಸೆ! ಹಠ ಹಿಡಿದ ಅವನ ಅಮ್ಮ ತಾನೆ ಎಲ್ಲಿಂದ ಹಾಲು ತಂದಾಳು? ಹಾಲು ಕೊಡದೇ ಮಗುವಿನ ಹಠ ನಿಲ್ಲಿಸಲಾದೀತೆ? ಕೊನೆಗೆ ಹೋಗೋ 'ಹಾಲು' ನೀಡಿದಳು ಹಿಟ್ಟುನೀರಿನ ಹಾಲು !! 'ಹಾಲು' ಕುಡಿದ ಮಗು ಹಠ ನಿಲ್ಲಿಸಿತು ಪ್ರತಿನಿತ್ಯ ಅಶ್ವತ್ಥಾಮ ಅದೇ 'ಹಾಲು' ಕುಡಿಯುತ್ತಿದ್ದ ಹಾಲಿನ ಖುಷಿ ಪಡೆಯುತ್ತಿದ್ದ ಹಿಟ್ಟು - ನೀರಿನ ಹಾಲೇ ಅವನ ಪಾಲಿಗೆ 'ಹಾಲು'!

ಒಮ್ಮೆ ಜೊತೆಗಾರರೊಂದಿಗೆ ಆಡಹೋದ ಅಶ್ವತ್ಥಾಮ ಸಂಜೆ ಅಲ್ಲಿಯೇ ಉಳಿದ ಆಟದ ನಂತರ ಅಲ್ಲಿ ಎಲ್ಲ ಮಕ್ಕಳಿಗೂ 'ಹಾಲು' ನೀಡಲಾಯಿತು ಕೇಸರ-ಸಕ್ಕರೆ ಬೆರೆಸಿದ ಹಾಲು ಅಶ್ವತ್ಥಾಮನೂ 'ಹಾಲು' ಕುಡಿದ ಬೆರಗಾದ! ಇಷ್ಟು ರುಚಿಯ ಹಾಲನ್ನು ಅವನೆಂದೂ ಕುಡಿದೇ ಇರಲಿಲ್ಲ ಅವನಿಗೆ ಅರ್ಥವಾಗುವುದು ತಡವಾಗಲಿಲ್ಲ ತನಗೆ ತನ್ನ ಅಮ್ಮ ಸುಳ್ಳು ಹೇಳಿದ್ದಾಳೆ ಎಂದು ಅವನಿಗೆ ಅನ್ನಿಸಿತು ಕೋಪದಲ್ಲಿ ಅಮ್ಮನ ಬಳಿಗೆ ಬಂದ ಹಾಲು ಕೊಡು ಎಂದು ಕೇಳಿದ ಅಮ್ಮ ಎಂದಿನಂತೆ 'ಹಾಲು' ಮಾಡಿ ನೀಡಿದಳು ಅಶ್ವತ್ಥಾಮ ಈಗ ನಿಜವಾದ ಹಾಲಿನ ರುಚಿ ಕಂಡು ಬಂದವ ಹಾಲೆಂದರೇನು ಎಂಬುದನ್ನು ಅರಿತವ ಅಮ್ಮ ನೀಡಿದ ಹಾಲಿನ ಬಟ್ಟಲನ್ನು ಬೀಸಿ ಎಸೆದ ತನಗೆ ನಿಜವಾದ ಹಾಲು ಬೇಕೆಂದು ಹಠ ಹಿಡಿದ ಅಮ್ಮನಿಗೆ ಗಾಬರಿಯಾಯಿತು ಅವಳ ಹಾಲಿನ ಗುಟ್ಟು ರಟ್ಟಾಗಿತ್ತು ಕೊನೆಗೆ ಅವನ ಅಮ್ಮ ನಿಜವಾದ ಹಾಲು ತಂದು ಕೊಟ್ಟಾಗಲೇ ಅಶ್ವತ್ಥಾಮ ಸುಮ್ಮನಾದದ್ದು!

ಹಿಟ್ಟಿನ ಹಾಲಿನ ರುಚಿ, ಹಸುವಿನ 'ಹಾಲು' ಸವಿಯುವ ವರೆಗೆ !!

'ಸಂಸಾರ-ಸುಖ'ದ ತೃಪ್ತಿ ಮುಕ್ತಿಯ ಸ್ವರೂಪಾನಂದ ದೊರೆಯುವವರೆಗೆ ಮಾತ್ರ!!

ನಾವೂ ಈಗ ಅಶ್ವತ್ಥಾಮನ 'ಹಾಲು' ಕುಡಿಯುತ್ತಿರುವೆವು. ಸಂಸಾರದ ಸುಖವನ್ನೇ ಸುಖವೆಂದು ಭ್ರಮಿಸಿರುವೆವು. ಮುಕ್ತಿ ಸುಖವೆಂಬುದು ನಿಜವಾದ ಹಾಲು ಎಂದು ಅರಿವಾದಾಗ ಈ ನಶ್ವರ ಸುಖದತ್ತ ತಿರುಗಿಯೂ ನೋಡದ ವೈರಾಗ್ಯ ತಾನೇ ಮೂಡುತ್ತದೆ.

**ಯಲ್ಲಡಿಯ ನೆಳಲಂತೆ ಭವಸುಖ**
**ತಲ್ಲಣವಗೊಳಿಸುವುದು ನಿಶ್ಚಯ**
**ವಲ್ಲ; ಸಾಲವ ಮಾಡಿ ಸಕ್ಕರೆ ಮೆದ್ದ ತೆರನಂತೆ ।**
**ಕ್ಷುಲ್ಲಕರ ಕೊಂಡಾಡದಲೆ ಶ್ರೀ-**
**ವಲ್ಲಭನ ಸದ್ಗುಣಂಗಳ**
**ಬಲ್ಲವರ ಕೂಡಾಡಿ ಸಂಪಾದಿಸುವ ಪರಮ ಪದವ ॥**

# ಬ್ರಹ್ಮಚರ್ಯ

ದೇವಲೋಕದ ಸಭೆಯಲ್ಲಿ ದೇವಸುಂದರಿ ಊರ್ವಶಿಯ ನರ್ತನ ನಡೆಯುತ್ತಿದೆ. ನೆರೆದ ಜನರೆಲ್ಲ ಅವಳ ಒನಪು-ವಯ್ಯಾರಗಳಿಗೆ ಹಾವ-ಭಾವ, ಲಾಸವಿಲಾಸಗಳಿಗೆ ಬೆಕ್ಕಸ ಬೆರಗಾಗಿ, ಮಾರು ಹೋಗಿದ್ದಾರೆ. ಅಂದಿನ ದೇವೇಂದ್ರನ ವಿಶೇಷ ಅತಿಥಿ ಅರ್ಜುನ. ಅರ್ಜುನ ಊರ್ವಶಿಯ ಬಗೆಗೆ ತುಂಬ ಕೇಳಿದ್ದ. ಕಂಡಿರಲಿಲ್ಲ. ಈಗ ನರ್ತನ ಮಾಡುತ್ತಿದ್ದ ಅವಳನ್ನು ತದೇಕದೃಷ್ಟಿಯಿಂದ ನೋಡತೊಡಗಿದ. ದೇವೇಂದ್ರ ಇದನ್ನು ಸೂಕ್ಷ್ಮವಾಗಿ ಗಮನಿಸಿದ.

ಅಂದು ನಂಜೆ ಊರ್ವಶಿಯನ್ನು ಕರೆದು ಅವಳನ್ನು ಅರ್ಜುನನ ವಿಶೇಷ ಆರೈಕೆಗೆ ದೇವೇಂದ್ರ ನಿಯಮಿಸಿದ. ದೇವೇಂದ್ರನ ಆದೇಶದಂತೆ ಊರ್ವಶಿ ಅರ್ಜುನ ವಾಸವಾಗಿದ್ದ ಅತಿಥಿಗೃಹಕ್ಕೆ ಹೋದಳು. ಊರ್ವಶಿ ದೇವಲೋಕದ ದಾಸಿ, ನಿತ್ಯಷೋಡಶಿ, ಅಪರೂಪದ ರೂಪಸಿ! ಅವಳಿರುವುದೇ ದೇವೇಂದ್ರನ ಅತಿಥಿಗಳ ಆತಿಥ್ಯಕ್ಕಾಗಿ!! ಈ ದಿನ ಅವಳು ಅರ್ಜುನನಿಗಾಗಿ!!

ಮನಮೋಹಕವಾಗಿ ಸಿಂಗರಿಸಿಕೊಂಡು ಬಾಗಿಲ ಬಳಿ ಬಂದು ನಿಂತ ಊರ್ವಶಿಯತ್ತ ಅರ್ಜುನ ನೋಡಿದ. ಬೆರಗಾದ. ಅವಳನ್ನು ಸ್ವಾಗತಿಸಿದ. ಅವಳಿಗೆ ಶಿರಬಾಗಿ ನಮಿಸಿ ಗೌರವಿಸಿದ. ಮನದ ತುಂಬೆಲ್ಲ ಬಯಕೆ ಹೊತ್ತು ಬಂದ ಊರ್ವಶಿ ಅರ್ಜುನನ ವರ್ತನೆ ತನ್ನ ಸೌಂದರ್ಯ-ಯೌವನಗಳಿಗೆ ಅವಮಾನವೆಂದು ಬಗೆದಳು. ಅವಳಿಗೆ ಕೋಪ ಬಂತು. ಶೃಂಗಾರದ ರಾಗವೆಲ್ಲ ಕರಗಿ, ಅನುರಾಗವೆಲ್ಲ ತಿರುಗಿ ಅವಳ ಕಣ್ಣು ಕೆಂಪಾದವು. ಅರ್ಜುನನಿಗೆ ನಪುಂಸಕನಾಗು ಎಂದು ಶಾಪವಿತ್ತಳು.

ಅರ್ಜುನ ಅವಳಲ್ಲಿ ವಿನಂತಿಸಿದ.

''ಅಮ್ಮಾ! ಊರ್ವಶೀ! ನೀವು ನನ್ನ ತಾಯಿಯಂತೆ ಆದರಣೀಯರು! ನೀವು ನನ್ನ ಮುತ್ತಜ್ಜ ಪುರೂರವನ ಮಡದಿಯಲ್ಲವೇ?

ಅಂದರೆ ನನ್ನ ಮುತ್ತಜ್ಜಿ! ಆದಕೆಂದೇ ನಿಮ್ಮತ್ತ ನಾನು ಕುತೂಹಲದಿಂದ ನೋಡಿದ್ದೇ ಹೋರತು, ಬೇರಾವ ಭಾವನೆಯಿಂದಲೂ ಅಲ್ಲ ತಾಯೆ! ನೀವು ಅನ್ಯಥಾ ಭಾವಿಸಬಾರದು''

★★★

ದುರ್ಯೋಧನ ರಣಾಂಗಣದಲ್ಲಿ ತೊಡೆ ಮುರಿಸಿಕೊಂಡು ಬಿದ್ದಿದ್ದಾನೆ ಸಾವು ಸಮೀಪಿಸಿದೆ ಅವನನ್ನು ಕಾಣಲು ದ್ರೋಣಪುತ್ರ ಅಶ್ವತ್ಥಾಮಾಚಾರ್ಯ ಅಲ್ಲಿಗೆ ಆಗಮಿಸಿದ ಅಶ್ವತ್ಥಾಮಾಚಾರ್ಯ ದುರ್ಯೋಧನನ ಗೆಳೆಯ ದುರ್ಯೋಧನನ ದುಃಸ್ಥಿತಿಯ ಕಂಡು ಮರುಗಿದ ಪಾಂಡವರ ಬಗೆಗೆ ಕೆಂಡವಾದ ದ್ವೇಷದ ಉರಿಯಿಂದ ಕುದಿಯುತ್ತಿದ್ದ ದುರ್ಯೋಧನನಿಗೊಂದು ಕೆಟ್ಟ ಯೋಚನೆ ಬಂತು ತನ್ನ ಕೊನೆಯಾಸೆ ನೆರವೇರಿಸಲು ಅಶ್ವತ್ಥಾಮಾಚಾರ್ಯನಲ್ಲಿ ಕೇಳಿಕೊಂಡ ಭಾವೋದ್ವೇಗದಲ್ಲಿದ್ದ ಅಶ್ವತ್ಥಾಮ ಅದಕ್ಕೆ ಯೋಚಿಸದೇ ಒಪ್ಪಿಕೊಂಡ ದುರ್ಯೋಧನನದು ಎರಡು ಕೋರಿಕೆಗಳು ಒಂದು - ಪಾಂಡವರ ಸಂತಾನವನ್ನೆಲ್ಲ ಕೊನೆಗಾಣಿಸಬೇಕು ಎರಡು - ದುರ್ಯೋಧನನ ಪತ್ನಿ ಭಾನುಮತಿಯಲ್ಲಿ ಸಂತಾನದ ಬೀಜಾವಾಪ ನಡೆಸಬೇಕು!

ಈ ಎರಡೂ ಕೋರಿಕೆಗಳಿಗೆ ಅಶ್ವತ್ಥಾಮ ''ಅಸ್ತು'' ಎಂದ ಆಜೀವನ ನೈಷ್ಠಿಕ ಬ್ರಹ್ಮಚರ್ಯ ನಡೆಸಿದ ಅಶ್ವತ್ಥಾಮ ಭಾನುಮತಿಯ ಮುಟ್ಟದಿದ್ದರೂ ಮನಸ್ಸಿನಿಂದ ಮೈಲಿಗೆಯಾದ ಬ್ರಹ್ಮಚರ್ಯ ಕಳೆದುಕೊಂಡ

★★★

ಆ ರಾತ್ರಿ ಕಳ್ಳನಂತೆ ಪಾಂಡವರ ಶಿಬಿರ ಪ್ರವೇಶಿಸಿದ ಅಶ್ವತ್ಥಾಮಾಚಾರ್ಯ ನಿದ್ರೆಯಲ್ಲಿದ್ದ ಹಸುಳೆಗಳ ಹತ್ಯೆಗೈದ ಬೆನ್ನಟ್ಟಿ ಬಂದ ಪಾಂಡವ ಸೋದರರತ್ತ 'ಬ್ರಹ್ಮಾಸ್ತ್ರ' ಪ್ರಯೋಗಿಸಿದ ಅರ್ಜುನನೂ ಅದಕ್ಕೆ 'ಪ್ರತಿಬ್ರಹ್ಮಾಸ್ತ್ರ' ಎಸೆದ ಈ ಎರಡು ಸಮಬಲದ ಅಸ್ತ್ರಗಳ ನಡುವೆ ತಿಕ್ಕಾಟ ಪ್ರಾರಂಭವಾಯಿತು ಎಲ್ಲೆಡೆ ಅದರಿಂದಾಗಿ ಹಾಹಾಕಾರವೆದ್ದಿತು

ವೇದವ್ಯಾಸರು ಮಧ್ಯೆ ಪ್ರವೇಶಿಸಿದರು. ತಮ್ಮ ತಮ್ಮ ಅಸ್ತ್ರವನ್ನು ಹಿಂದೆಗೆದುಕೊಳ್ಳುವಂತೆ ಅರ್ಜುನ, ಅಶ್ವತ್ಥಾಮರಿಗೆ ಆದೇಶಿಸಿದರು. ಅರ್ಜುನನಿಗೆ ಅವರ ಆದೇಶದಂತೆ ತಾನು ಪ್ರಯೋಗಿಸಿದ ಬ್ರಹ್ಮಾಸ್ತ್ರ ಹಿಂದೆ ಪಡೆಯಲು ಸಾಧ್ಯವಾಯಿತು. ಆದರೆ, ಮಾನಸಿಕವಾಗಿ ಭ್ರಷ್ಟರಾಗಿ ಬ್ರಹ್ಮಚರ್ಯ ಕಳೆದುಕೊಂಡ ಅಶ್ವತ್ಥಾಮರಿಂದ 'ಬ್ರಹ್ಮಾಸ್ತ್ರ'ದ ಉಪಸಂಹಾರ ಸಾಧ್ಯವಾಗಲಿಲ್ಲ. ಕೊನೆಗೆ ಅರ್ಜುನನೇ ತನ್ನ ಬ್ರಹ್ಮಚರ್ಯದ ಬಲದಿಂದ ಅಶ್ವತ್ಥಾಮರ ಬ್ರಹ್ಮಾಸ್ತ್ರವನ್ನು ಉಪಸಂಹರಿಸಿದನು.

★★★

ಮದುವೆಯಾಗದೇ ಬ್ರಹ್ಮಚಾರಿಯಾಗಿದ್ದ ಅಶ್ವತ್ಥಾಮಾಚಾರ್ಯ ಒಂದು ಕ್ಷಣದ ಅಚಾತುರ್ಯದಿಂದ ಬ್ರಹ್ಮಚರ್ಯ ಕಳೆದುಕೊಂಡಿದ್ದರು. ಮದುವೆಯಾಗಿ ನಾಲ್ಕು ಮಡದಿಯರ ಗಂಡನಾಗಿದ್ದರೂ ಅರ್ಜುನ ತನ್ನ ಪರನಾರೀ ಸೋದರಭಾವದಿಂದಾಗಿ 'ಬ್ರಹ್ಮಚಾರಿ'ಯೇ ಆಗಿದ್ದ!

ನಮ್ಮದೂ 'ಅಶ್ವತ್ಥಾಮ'ರ ಸ್ಥಿತಿ. ನಮ್ಮ ಇಂದ್ರಿಯಗಳನ್ನು ವಿಷಯ ಪದಾರ್ಥಗಳೆಡೆಗೆ ಹರಿಸುವೆವು. ಮತ್ತೆ ಹಿಂದೆ ಪಡೆಯಲು ಮಾತ್ರ ನಮ್ಮಿಂದಾಗದು!! ನಮ್ಮದೇ ಇಂದ್ರಿಯಗಳ ಮೇಲೆ ನಮಗೆ ಹತೋಟಿಯಿಲ್ಲ. ನಾವು ಮನೋಬಲ ಕಳೆದುಕೊಂಡ 'ನಪುಂಸಕ'ರಾಗಿದ್ದೇವೆ. 'ಬ್ರಹ್ಮಚರ್ಯ' ಕಳೆದುಕೊಂಡಿದ್ದೇವೆ.

ಮಹಾಭಾರತ

★★★

# ಭಗವಂತನನ್ನು ಪಡೆದ ಅರ್ಜುನ

ಶ್ರೀಕೃಷ್ಣ ನಿದ್ದೆಯಿಂದ ಎದ್ದು ಕಣ್ಣುಬಿಟ್ಟಾಗ ಕಂಡದ್ದು ಅವನ ಕಾಲಬಳಿ ಕುಳಿತು ಕಾಯುತ್ತಿದ್ದ ಅರ್ಜುನ ಕೃಷ್ಣನಿಗೆ ನಂತಸವಾಯಿತು ಅರ್ಜುನನ ಕುಶಲ ವಿಚಾರಿಸತೊಡಗಿದ ಕೃಷ್ಣ ಮಲಗಿದ ಮಂಚದ ಇನ್ನೊಂದು ಬದಿ ಕುಳಿತ ದುರ್ಯೋಧನನಿಗೆ ಅಸಹನೆಯಾಯಿತು ಕೃಷ್ಣನ ಗಮನ ತನ್ನೆಡೆಗೆ ಸೆಳೆಯುತ್ತ ತನ್ನ ಆಗಮನವನ್ನೂ ಸೂಚಿಸಿದ ಕೃಷ್ಣ ಅವನನ್ನೂ ಅಭಿನಂದಿಸಿದ ಬಂದ ಕಾರಣ ಕೇಳಿದ

ದುರ್ಯೋಧನ ನುಡಿದ ''ಕೃಷ್ಣ, ನಿನಗೆ ಗೊತ್ತೇ ಇದೆ ನಾವಿಬ್ಬರೂ ನಿನಗೆ ಬಂಧುಗಳು ನಮ್ಮೀರ್ವರ ನಡುವೆ ಯುದ್ಧ ನಿಶ್ಚಿತವಾಗಿರುವುದು ನಿನಗೆ ತಿಳಿದ ವಿಷಯವೇ ಈಗ ಯುದ್ಧದಲ್ಲಿ ನೀನು ಪಕ್ಷಪಾತ ಮಾಡದೇ ನಮಗೂ ಸಹಾಯ ಮಾಡಬೇಕು ''

ಅರ್ಜುನ ಮಾತನಾಡಲ್ಲಿ ಕೃಷ್ಣ ಒಂದು ಕ್ಷಣ ಯೋಚಿಸಿದ

''ದುರ್ಯೋಧನ! ಅರ್ಜುನ! ನೀವಿಬ್ಬರೂ ನನಗೆ ಬಂಧುಗಳು ಅದಕ್ಕೆಂದೇ, ನಾನು ನಿಮಗೆ ನನ್ನಿಂದಾಗಬಹುದಾದ ಸಹಾಯ ಖಂಡಿತ ಮಾಡುತ್ತೇನೆ ನನ್ನ ಸಮಸ್ತ ಸೇನೆ-ಶಸ್ತ್ರಾಸ್ತ್ರಗಳು ಒಂದೆಡೆ, ನಾನು ಓರ್ವನೇ ಮತ್ತೊಂದೆಡೆ ನಿಮ್ಮಲ್ಲಿ ಜಗಳ ಬೇಡ ಯಾರು ಯಾವುದನ್ನೂ ಆಯ್ದುಕೊಳ್ಳಬಹುದು ಆಯ್ಕೆ ನಿಮಗೆ ಬಿಟ್ಟದ್ದು ಆದರೆ, ನನ್ನನ್ನು ಆಯ್ದುಕೊಳ್ಳುವವರ ಪಕ್ಷದಲ್ಲಿ ನಾನು ಅವರ ಜೊತೆಗೆ ಇರುವೆನಾದರೂ, ಶಸ್ತ್ರ ಹಿಡಿದು ಯುದ್ಧ ಮಾಡಲಾರೆ! ಈ ಶರತ್ತೂ ನಿಮಗೆ ನೆನಪಿರಲಿ ''

ದುರ್ಯೋಧನ ಯೋಚಿಸಿದ ಅರ್ಜುನನಿಗೆ ತನ್ನ ಆಯ್ಕೆ ಮೊದಲೇ ನಿಶ್ಚಿತವಾಗಿತ್ತು ದುರ್ಯೋಧನನೇ ಮೊದಲ ಆಯ್ಕೆಯ ಅವಕಾಶ ಪಡೆದ ಕೃಷ್ಣನನ್ನು ಹೊರತುಪಡಿಸಿದ ಸಮಸ್ತ ಯಾದವಸೇನೆಯನ್ನು ಆಯ್ದುಕೊಂಡ ತನ್ನ ಆಯ್ಕೆಯ ಬಗೆಗೆ ಹಿಗ್ಗಿ ತನ್ನೂರಿಗೆ ಹಿಂದಿರುಗಿದ ಅರ್ಜುನನಿಗೆ ಉಳಿದ ಪಾಲು ಅವನ ಅಭೀಷ್ಟವೇ ಆಗಿತ್ತು ಶ್ರೀಕೃಷ್ಣ ಅವರ

ಪಕ್ಷದಲ್ಲಿ ನಿಂತ. ಯುದ್ಧ ಜರುಗಿತು. ಫಲಿತಾಂಶ ನಿಮಗೆಲ್ಲ ಗೊತ್ತೇ ಇದೆ. ಭಗವಂತನಿಂದ ಸಮಸ್ತ ಸೇನಾಬಲ ಪಡೆದ ದುರ್ಯೋಧನ ಸೋಲನ್ನುಂಡ. ನೆಲಕಚ್ಚಿದ. ಸಾಕ್ಷಾತ್ ಭಗವಂತನನ್ನೇ ಪಡೆದ ಪಾಂಡವರು ಜಯಶೀಲರಾದರು.

ಭಗವಂತ ಶಾಶ್ವತ; ಭಗವಂತನಿಂದ ಪಡೆದದ್ದಲ್ಲ!!

ಆದುದರಿಂದ ನಾವು ಭಗವಂತನನ್ನು ಬಯಸಿ ಪಡೆಯಬೇಕೇ ಹೊರತು, ಭಗವಂತನಿಂದ ಬಯಸಬಾರದು.



# ನಗಾರಿ ಎಚ್ಚರ

ರಾಜಾಸ್ಥಾನದ ಕಾರ್ಯಕಲಾಪಗಳೆಲ್ಲ ಮುಗಿದು ಮಂತ್ರಿಗಳೆಲ್ಲ ಮನೆಗೆ ತೆರಳಿದ್ದರು ಕೋಶಾಧಿಕಾರಿಗಳೂ ಇರಲಿಲ್ಲ ಬಡಬ್ರಾಹ್ಮಣನೋರ್ವ ಬಹು ದೂರದಿಂದ ಬಂದ ಚಕ್ರವರ್ತಿ ಧರ್ಮರಾಯನ ಬಳಿ ತಾನು ನಡೆಸುವ ಯಜ್ಞಕ್ಕಾಗಿ ದಾನವಾಗಿ ಸಹಾಯಧನ ಬೇಡಿದ ತರಾತುರಿಯಲ್ಲಿದ್ದ ಧರ್ಮರಾಜ ಮಾರನೇ ದಿನ ಬರಲು ಬ್ರಾಹ್ಮಣನಿಗೆ ತಿಳಿಸಿದ

ಆ ಬ್ರಾಹ್ಮಣನಿಗೆ ತನ್ನೂರಿಗೆ ಹಿಂದಿರುಗುವ ಆತುರ ತಕ್ಷಣ ಯುವರಾಜ ಭೀಮಸೇನನ ಬಳಿ ಸಾಗಿದ ತನ್ನ ಪರಿಸ್ಥಿತಿ ಅರುಹಿದ ನಡೆದ ಘಟನೆಯನ್ನೂ ಹೇಳಿದ ಆ ಬ್ರಾಹ್ಮಣನು ಯೋಚಿಸಿದಾಕ್ಷಣ ಒಂದು ಕ್ಷಣವೂ ಯೋಚಿಸದೇ ಭೀಮಸೇನ ತನ್ನ ಕೈಯ ಚಿನ್ನದ ಕಡಗ ತೆಗೆದು ಅವನಿಗೆ ದಾನವಿತ್ತ ಮಹಾದ್ವಾರದ ಬಳಿ ಬಂದು, ದ್ವಾರಪಾಲರಿಗೆ ಸಂತಸದ ನಗಾರಿಯ ಮೊಳಗಿಸಲು ಆದೇಶಿಸಿದ ಆ ನಗಾರಿಯ ದನಿಯನ್ನು ಕೇಳಿದ ಧರ್ಮರಾಜ ವಿಷಯವೇನೆಂದು ಭೀಮಸೇನನ್ನು ಕರೆಸಿ ಕೇಳಿದ ಅದಕ್ಕೆ ನಗುತ್ತ ''ನಮ್ಮ ಚಕ್ರವರ್ತಿಗಳು ನಾಳೆಯೂ ಜೀವಿಸಿರುತ್ತಾರೆಂಬುದನ್ನು ತಿಳಿದು ಆ ಸಂತಸದ ಸುದ್ದಿಯ ಹರಡಲು ಈ ನಗಾರಿಯ ಸದ್ದು!'' ಎಂದು ಭೀಮಸೇನ ಧರ್ಮರಾಜನಿಗೆ ನಾಚಿಕೆಯಾಯಿತು ಸತ್ಕಾರ್ಯಗಳನ್ನು ಮುಂದೆ ಮುಂದೆ ಹಾಕುವ ನಮ್ಮ ಪ್ರವೃತ್ತಿಯ ಬಗೆಗೆ ಕಟುಹಾಸ್ಯದ ಜೊತೆಗೆ ಈ ಕತೆ ಎಚ್ಚರ ನೀಡುತ್ತದೆ

''ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್''

ಅನುಕ್ಷಣ ಸಾವಿನ ದವಡೆಯಲ್ಲಿರುವ ನಾವು ಧರ್ಮಕಾರ್ಯವನ್ನು ವಿಳಂಬವಿಲ್ಲದೇ ನಡೆಸಬೇಕು

**- ಮಹಾಭಾರತ**

# ಶಿಬಿಯ ಆತ್ಮ ಬಲಿದಾನ

ಇನ್ನೇನು ರಾಜಾ ಶಿಬಿ ಯಜ್ಞಾಂಗವಾದ ದಾನವನ್ನೆಲ್ಲ ನೀಡಿ, ಹೊರಟು ನಿಂತಿದ್ದ, ಅಷ್ಟರಲ್ಲಿ ಪುಟ್ಟ ಪಾರಿವಾಳವೊಂದು ಅವನ ತೊಡೆಯನೇರಿ ಕುಳಿತಿತು ಭಯದಿಂದ ನಡುಗುತ್ತಿದ್ದ ಆ ಹಕ್ಕಿಯ ಕಂಗಳು ರಾಜನಲ್ಲಿ ಅಭಯ ಭಿಕ್ಷೆಯ ಬೇಡುತ್ತಿದ್ದವು ರಾಜ ಪ್ರೀತಿಯಿಂದ ಅದರ ಮೈದಡವಿದ ಅಭಯ ನೀಡಿದ ಹಿಂದೆಯೇ ಇದ್ದಕ್ಕಿದ್ದಂತೆ, ಭಾರೀ ಗಾತ್ರದ ಗಿಡುಗವೊಂದು ಬಂದೆರಗಿತು ರಾಜನ ಬಳಿ ಅಡಗಿ ಕುಳಿತ ಪಾರಿವಾಳವನ್ನು ಕಚ್ಚಿಕೊಂಡು ಹೋಗುವ ಆತುರ ಅದಕ್ಕೆ!

ರಾಜನಿಗೆ ಅರ್ಥವಾಯಿತು ಗಿಡುಗಕ್ಕೆ ಹೇಳಿದ ''ಗಿಡುಗನೇ! ಈ ಪುಟ್ಟ ಪಾರಿವಾಳ ಈಗ ನನ್ನ ಅತಿಥಿ ನನ್ನ ಬಳಿ ಅಭಯ ಬೇಡಿ ಬಂದ ಶರಣಾರ್ಥಿ ನಾನಿದನ್ನು ನಿನಗೆ ಬಿಟ್ಟು ಕೊಡಲಾರೆ ನಿನ್ನ ದಾರಿ ನೀ ಹುಡುಕಿಕೊಳ್ಳಬಹುದು ''

''ಹೇ ರಾಜನ್, ಆಹಾರ ಎಲ್ಲ ಪ್ರಾಣಿಗಳ ಜನ್ಮಸಿದ್ಧ ಹಕ್ಕು ನನ್ನ ಆಹಾರ ನೀನು ಕಸಿದುಕೊಂಡರೆ ಅದು ಪಾಪವಾಗದೇ? ಒಂದು ಪ್ರಾಣವನ್ನು ಉಳಿಸ ಹೊರಟ ನೀನು ನನ್ನ ಇಡೀ ಕುಟುಂಬದ ಪ್ರಾಣದ ಬಗೆಗೆ ಯೋಚಿಸಿರುವೆಯಾ?

ಈ ದಿನ ಈ ಪಾರಿವಾಳ ಕೈತಪ್ಪಿತು ಪ್ರತಿದಿನ ಹೀಗೆಯೇ ನಡೆದರೆ, ನಮ್ಮ ಪ್ರಾಣದ ಗತಿಯೇನು? ಅಲ್ಲದೇ, ಒಂದು ಪ್ರಾಣಿಗೆ ಇನ್ನೊಂದು ಪ್ರಾಣಿಯೇ ಆಹಾರ ಇದು ಪ್ರಕೃತಿ ನಿಯಮ!

ಆದುದರಿಂದ ನನ್ನ ಆಹಾರ ನನಗೆ ಹಿಂದಿರುಗಿಸುವುದೇ ಸರಿಯಾದ ಧರ್ಮ ವಿಚಾರ ಮಾಡು ಧರ್ಮದ ಮರ್ಮವೆಲ್ಲ ತಿಳಿದ ನಿನಗೆ ಹೇಳುವುದೇನಿದೆ?

ಸರಿ! ವೃಥಾ ಚರ್ಚೆ ಏಕೆ? ನನಗೆ ದಕ್ಕಬೇಕಾದ ಇಂದಿನ ನನ್ನ ಬೇಟೆಯನ್ನು ನನಗೆ ನೀಡು'' ಗಿಡುಗ ಹೇಳಿತು

ರಾಜಾ ಶಿಬಿ ಉತ್ತರಿಸಿದ ''ಗಿಡುಗನೇ, ನಿನಗೆ ಬೇಕಾದುದು ಆಹಾರ, ನನಗೆ ಬೇಕಾದುದು ಈ ಪಾರಿವಾಳದ ರಕ್ಷಣೆ ಕೇಳು ನಿನಗೆ ಈ ಪಾರಿವಾಳದ ಬದಲಾಗಿ ಯಾವ ಆಹಾರ ಬೇಕು? ನಾನು ನೀಡುತ್ತೇನೆ!''

''ರಾಜನೇ, ನಾವು ಮಾಂಸಾಹಾರಿಗಳು ಈ ಪಾರಿವಾಳ ನನ್ನ ಈ ದಿನದ ಬೇಟೆ ಇದರ ಬದಲು ನನಗೆ ನೀನು ಕೊಡುವುದಾದರೆ, ಇಂತಹುದೇ ಇನ್ನೊಂದು ಪಾರಿವಾಳದ ಮಾಂಸ ನೀಡಬೇಕಾಗುತ್ತದೆ ಈ ಹಕ್ಕಿಯ ರಕ್ಷಿಸಲು ಹೋಗಿ ಇನ್ನೊಂದು ಅಮಾಯಕ ಹಕ್ಕಿಯ ಬಲಿ ಕೊಡುವದು ಸರಿಯೇ? ಇನ್ನೊಮ್ಮೆ ಯೋಚಿಸು ಈ ಎಲ್ಲ ಗೊಂದಲಕ್ಕಿಂತ ನನಗೆ ಈ ಪಾರಿವಾಳವನ್ನೇ ಬಿಟ್ಟುಕೊಡು ಅದೇ ಉಚಿತ'' ಗಿಡುಗ ಪಟ್ಟು ಹಿಡಿಯಿತು

ಶಿಬಿ ಚಿಂತಾಕ್ರಾಂತನಾದ ಯೋಚಿಸತೊಡಗಿದ

ಗಿಡುಗ ಮತ್ತೆ ಮುಂದುವರೆಯಿತು ''ಇಲ್ಲಾವಾದರೆ ಈ ಪಾರಿವಾಳದ ಬದಲು ಸಮತೂಕದ ನಿನ್ನ ದೇಹದ ಮಾಂಸ ನೀಡುವಿಯಾದರೆ ನನ್ನ ಅಭ್ಯಂತರವೇನೂ ಇಲ್ಲ''

ರಾಜನ ಮುಖ ತಕ್ಷಣ ಬೆಳಗಿತು ಆತ್ಮ ತ್ಯಾಗದ ಮಹಾನಂದದ ಬೆಳಕು ಅದು ಶಿಬಿ ದೃಢ ನಿರ್ಧಾರದಿಂದ ನುಡಿದ

''ಓಹೋ! ಇದು ನನಗೆ ಸಮ್ಮತ ಈ ಪಾರಿವಾಳದ ಬದಲು ಇದೋ! ಈ ನನ್ನ ಶರೀರದ ಮಾಂಸ ತೆಗೆದುಕೋ''

ಪಾರಿವಾಳದ ತೂಕಕ್ಕೆ ಸಮನಾದ ಮಾಂಸವನ್ನು ನೀಡುವುದೆಂದು ಒಪ್ಪಂದವಾಯಿತು ಶಿಬಿ ತನ್ನ ತೊಡೆಯ ಒಂದಿಷ್ಟು ಮಾಂಸ ಕಿತ್ತು ತೆಗೆದು ಪಾರಿವಾಳವನ್ನು ತಕ್ಕಡಿಯಲ್ಲಿಟ್ಟು ತೂಗಿದ ಪಾರಿವಾಳ ಕುಳಿತ ಭಾಗ ಮೇಲೇಳಲಿಲ್ಲ ಮತ್ತೆ ಒಂದಷ್ಟು ಮಾಂಸ ತೆಗೆದು ಹಾಕಿದ ಪಾರಿವಾಳದ ತೂಗುಮಣಿ ಕದಲಲಿಲ್ಲ ಶಿಬಿ ಮತ್ತೆ ಮಾಂಸ ಸೇರಿಸಿದ ಆದರೂ, ತಕ್ಕಡಿ ಏರಲಿಲ್ಲ ಕೊನೆಗೆ ಶಿಬಿ ತಾನೇ ತಕ್ಕಡಿಯ ಒಂದು ಭಾಗದಲ್ಲಿ ಕುಳಿತ ಆತ್ಮ

ಶರಣುಬಂದ ಪುಟ್ಟ ಪಾರಿವಾಳಷದ ರಕ್ಷಣೆಗಾಗಿ ತನ್ನನ್ನೇ ತಾನು ಬಲಿಯಾಗಿ ಅರ್ಪಿಸಿಕೊಂಡ. ಶಿಬಿಯ ಬಲಿದಾನ, ಆತ್ಮಸಮರ್ಪಣೆ ಇತಿಹಾಸದಲ್ಲಿ ಸಾಟಿಯಿಲ್ಲದ ದಾನ.

ಈ ಕತೆ ನಮ್ಮ ಪ್ರಾಚೀನರ ಉದಾತ್ತ ತ್ಯಾಗ-ಬಲಿದಾನಗಳಿಗೆ ಹೆಸರಾದ ಕತೆ. ಸುತ್ತ ಸ್ವಾರ್ಥದ ಕೊಂಪೆಯಲ್ಲಿ ಹೂತುಹೋಗಿರುವ ನಮ್ಮಂತಹವರ ಕಣ್ತೆರೆಸುವ ಆದರ್ಶದ ಕತೆ !

- ಮಹಾಭಾರತ

**ಆತ್ಮಾರ್ಥಂ ಜೀವ ಲೋಕೇऽಸ್ಮಿನ್**
**ಕೋ ನ ಜೀವತಿ ಮಾನವಃ ।**
**ಪರಂ ಪರೋಪಕಾರಾರ್ಥ**
**ಯೋ ಜೀವತಿ, ಸ ಜೀವತಿ ॥**



# ವೀರಮಾತೆ

''ಧಡ್ ಧಡ್ ಧಡ್ '' ಎಷ್ಟು ಬಂದರೂ ಬಾಗಿಲು ತೆರೆಯುತ್ತಿಲ್ಲ ಹಿಂದೆ ವೈರಿಗಳು ಬೆನ್ನಟ್ಟಿ ಬರುತ್ತಿರುವರು ಏನು ಮಾಡುವುದು? ತಿಳಿಯುತ್ತಿಲ್ಲ ಪ್ರಾಣ ಉಳಿಸಿಕೊಳ್ಳುವ ಬೇರಾವ ಮಾರ್ಗವೂ ತೋಚುತ್ತಿಲ್ಲ ಮತ್ತೆ ಜೋರಾಗಿ ಕೂಗಿದ ಕೋಟೆಯ ಮೇಲುಗಡೆ ಅವನ ತಾಯಿ ಕಂಡಳು ಹೋದ ಜೀವ ಮರಳಿ ಬಂದಂತಾಯಿತು ಅವಳಲ್ಲಿ ಕೋಟೆಯ ಬಾಗಿಲು ಬೇಗ ತೆರೆಯಲು ಬೇಡಿದ ಆ ರಾಜಕುಮಾರನ ತಾಯಿ ಅಚಲಳಾಗಿದ್ದಳು ಈ ಮಗ ಮತ್ತೆ ಪರಿ-ಪರಿಯಾಗಿ ಬೇಡಿಕೊಂಡ, ಅಂಗಲಾಚಿದ ಆದರೆ, ಆ ತಾಯಿಯ ಮನಕರಗಲಿಲ್ಲ ಬಾಗಿಲು ತೆರೆಯಲಿಲ್ಲ

ಅವಳು ಕೂಗಿ ಹೇಳಿದಳು

''ಶತ್ರುಗಳಿಗೆ ಅಂಜಿ ಓಡಿ ಬರುವ ನೀನು ನನ್ನ ಮಗನೇ ಅಲ್ಲ, ನನಗೆ ಮಗನಿರದಿದ್ದರೂ ಚಿಂತೆಯಿಲ್ಲ ಇಂತಹ ಹೇಡಿ ಮಗ ನನಗೆ ಬೇಡ ! ಹೋಗು ಹೊರಟು ಹೋಗು ನಿನಗೆ ಈ ಅರಮನೆಗೆ ಪ್ರವೇಶವಿಲ್ಲ''

ಕೋಟೆಯ ಕಬ್ಬಿಣದ ಬಾಗಿಲುಗಳಷ್ಟೇ ಅವಳ ಹೃದಯದ ಬಾಗಿಲುಗಳೂ ಗಟ್ಟಿಯಾಗಿದ್ದವು

ಆ ನಿಷ್ಠುರ ಮಾತಿಗೆ ಮಗ ಬೇಸರಗೊಂಡು ಜೀವನದ ಬಗ್ಗೆ ತಾತ್ಸಾರ ತಳೆದ ಅವನ ನೋಟ ಹಿಂದಕ್ಕೆ ತಿರುಗಿತು ದೂರದಲ್ಲಿ ಬೆನ್ನಟ್ಟಿ ಬರುತ್ತಿರುವ ಶತ್ರು ಸೈನ್ಯದತ್ತ ನೋಡಿದ ಅವರತ್ತ ತನ್ನ ಕುದುರೆಯನ್ನೋಡಿಸಿದ ಎರಗಿದ ಪ್ರಾಣ ಲೆಕ್ಕಿಸದೇ ಹೋರಾಡಿದ ಶತ್ರುಗಳ ಮಣ್ಣುಮುಕ್ಕಿಸಿದ ವಿಜಯದ ಪತಾಕೆ ಹಿಡಿದು ಅರಮನೆಗೆ ಹಿಂದಿರುಗಿದ

ಈಗ ಕೋಟೆಯ ಬಾಗಿಲು ತೆರೆದಿದೆ ಅವನನ್ನು ಸ್ವಾಗತಿಸಲು ಇಡೀ ಊರಿಗೆ ಊರೇ ತಳಿರು-ತೋರಣ ಹೊತ್ತು ಕಾಯುತ್ತಿತ್ತು ಮಗನನ್ನು

ಎದಿರುಗೊಳ್ಳಲು ತಾಯಿಯೇ ಆರತಿ ಹಿಡಿದು ನಿಂತಿದ್ದಳು. ರಣರಂಗದಲ್ಲಿ ಹೋರಾಡಿ ಜಯಗಳಿಸಿ ಬಂದ ಕೆಚ್ಚೆದೆಯ ವೀರಪುತ್ರನ ತಾಯಿಯೆಂಬ ಹೆಮ್ಮೆ ಅವಳ ಮೊಗದಲ್ಲಿ ಕಾಣುತ್ತಿತ್ತು.

ಇದು ಶ್ರೀಕೃಷ್ಣನ ಮೂಲಕ ಪಾಂಡವರಿಗೆ ಕುಂತಿ ನೀಡಿದ ಸಂದೇಶ. ತಾಯಿ ತನ್ನ ಮಕ್ಕಳಿಗೆ ನೀಡಿದ ಕರ್ತವ್ಯ ಜಾಗೃತಿಯ ನಿಷ್ಠುರ ಸಂದೇಶ!!

-ಮಹಾಭಾರತ.

**ಮಕ್ಕಳ ಬೆಳವಣಿಗೆಯಲ್ಲಿ ತಾಯಿಯ ಪಾತ್ರ ತುಂಬ ಹಿರಿದು. ಮಕ್ಕಳನ್ನು ನಿಷ್ಠುರತೆಯಿಂದಲಾದರೂ, ಸನ್ಮಾರ್ಗದಲ್ಲಿ ತೊಡಗಿಸುವ ಜವಾಬ್ದಾರಿ ತಾಯಿಯದೇ ಆಗಿದೆ. ಇದನ್ನು ಇಂದಿನ ನಮ್ಮ ತಾಯಂದಿರು ಮನಗಾಣಬೇಕು.**

**ಸುಸಂಸ್ಕೃತ ಮಕ್ಕಳು, ತಾಯಿ ದೇಶಕ್ಕೆ ನೀಡುವ ದೊಡ್ಡ ಕೊಡುಗೆ ; ಸಂಪತ್ತು.**



# ಅನ್ನದ ಪರಿಣಾಮ

ಮಹಾಭಾರತ ಸಂಗ್ರಾಮ ಮುಗಿದಿದೆ ಹದ್ದು-ನರಿ-ನಾಯಿಗಳಿಂದ ತುಂಬಿದ ಭೀಕರ ರಣಾಂಗಣದ ನಡುವೆ ಕುರುಕುಲದ ಹಿರಿಯ ತಲೆ ಪಿತಾಮಹ ಭೀಷ್ಮ ಶರಮಂಚದಲ್ಲಿ ಮಲಗಿದ್ದಾರೆ ಮರಣಕ್ಕಾಗಿ ಉತ್ತರಾಯಣದ ನಿರೀಕ್ಷೆಯಲ್ಲಿದ್ದಾರೆ ಚಕ್ರವರ್ತಿ ಧರ್ಮರಾಜ, ಧರ್ಮದ ಮರ್ಮ ತಿಳಿಯಲು, ಭೀಷ್ಮರಲ್ಲಿಗೆ ತನ್ನೆಲ್ಲ ಬಳಗದ ಜೊತೆ ಬಂದಿದ್ದಾನೆ ಬಹಳ ಹೊತ್ತು ಪ್ರಶ್ನೋತ್ತರ ಚರ್ಚೆ ನಡೆಯುತ್ತವೆ ಕೊನೆಗೆ ಅಲ್ಲಿಯೇ ಇದ್ದ ದ್ರೌಪದಿ ನಗುತ್ತಾ ವ್ಯಂಗ್ಯವಾಡುತ್ತಾಳೆ

''ಭೀಷ್ಮರೇ! ಧರ್ಮದ ಬಗ್ಗೆ ಇಷ್ಟೊಂದು ಧಾರಾಳವಾಗಿ ಉಪದೇಶ ನೀಡುವ ಈ ತಮ್ಮ ಧರ್ಮಪ್ರಜ್ಞೆ ದ್ಯೂತದ ಸಭೆಯ ಸಮಯದಲ್ಲಿ ಏಕೆ ಮಂಕಾಗಿತ್ತು? ಆಗ ಅಲ್ಲಿ ನಡೆದ ಅನ್ಯಾಯವನ್ನು ಕಿಂಚಿತ್ತೂ ಪ್ರತಿಭಟಿಸಿದ ನಿಮ್ಮ ಧರ್ಮಜ್ಞಾನ ಬೆಲೆ ಇದೆಯೆ?'' ದ್ರೌಪದಿಯ ಈ ದಿಟ್ಟ ಪ್ರಶ್ನೆಗೆ ಭೀಷ್ಮರು ತುಂಬು ಗಾಂಭೀರ್ಯದಲ್ಲಿ ಶಾಂತವಾಗಿ ಉತ್ತರಿಸಿದರು

''ಮಗಳೇ! ದ್ರೌಪದಿ! ಇದೆಲ್ಲ ಆಹಾರದ ಪರಿಣಾಮವಮ್ಮ ! ದುರ್ಯೋಧನನ ಮನೆಯ ಅನ್ನದ ಪ್ರಭಾವ ಆ ಪಾಪದ ರಕ್ತ ನನ್ನ ಬುದ್ಧಿಗ ತುಕ್ಕು ಹಿಡಿಸಿತ್ತು ದುಷ್ಟ ಆಹಾರದಿಂದ ಉಂಟಾದ ಮನೋವೃತ್ತಿಯ ಅಬ್ಬರದಲ್ಲಿ ಧರ್ಮದ ದನಿ ಅಡಗಿಹೋಗಿತ್ತು ಋಣಪ್ರಜ್ಞೆ ಧರ್ಮಪ್ರಜ್ಞೆಯನ್ನು ದೂರಮಾಡಿತ್ತು ಈಗ ಆ ಋಣದ ರಕ್ತ ನನ್ನ ಮೈಯಿಂದ ಸೋರಿ ಹೋಗಿದೆ ನಾನೀಗ ಪರಿಶುದ್ಧನಾಗಿದ್ದೇನೆ''

ಶುದ್ಧತೆಯನ್ನು ಗಮನಿಸದೇ ನಾವು ಸ್ವೀಕರಿಸುವ ಆಹಾರ ನಮ್ಮ ಮನಸ್ಸಿನ ಮೇಲೆ ಬೀರುವ ಪ್ರಭಾವದ ಬಗೆಗೆ ನಾವು ಗಂಭೀರವಾಗಿ ಯೋಚಿಸುವಂತೆ ಮಾಡುವ ಮನೋಜ್ಞ ಕತೆಯಿದು

# ಕೇಳಿ ಕೈ ಕಡಿಸಿಕೊಂಡ...

ಶಂಖ ಅಣ್ಣ ಲಿಖಿತ ತಮ್ಮ ಇಬ್ಬರ ಮನೆಗಳೂ ಅಕ್ಕ-ಪಕ್ಕದಲ್ಲೇ ಮನೆಗಳಿಗೆ ಹೊಂದಿಕೊಂಡೇ ಇಬ್ಬರದೂ ತೋಟಗಳು ಸೋದರರಿಬ್ಬರೂ ತುಂಬ ಅನ್ಯೋನ್ಯ ಭೇದ-ಭಾವವಿಲ್ಲದವರು

ಒಮ್ಮೆ ಅಣ್ಣ ಶಂಖ ಕಾರ್ಯನಿಮಿತ್ತ ಪರ ಊರಿಗೆ ಹೋದ ತಮ್ಮ ಲಿಖಿತ ಸುಮ್ಮನೇ ಶಂಖನ ತೋಟದತ್ತ ಬಂದ ತಿರುಗಾಡಿದ ತೋಟದ ಒಂದೆಡೆ ಹಣ್ಣು ತುಂಬಿದ ಮಾವಿನಮರ ಕಂಡ ಕಳಿತ ಮಾವಿನಹಣ್ಣುಗಳು ಲಿಖಿತನಿಗೆ ಆಸೆ ಮೂಡಿಸಿದವು ಹಣ್ಣಿನ ಭಾರಕ್ಕೆ ಬಗ್ಗಿದ ಮರಕ್ಕೆ ಕೈ ಹಾಕಿದರೆ ಹಣ್ಣಿನ ರಾಶಿ! ಲಿಖಿತ ಕೈಯಿಂದಲೇ ಕೆಲ ಹಣ್ಣು ಕಿತ್ತ ಎಷ್ಟೆಂದರೂ ಸ್ವಂತ ಅಣ್ಣನದೇ ತೋಟ ಅಲ್ಲವೆ? ತಪ್ಪೇನು? ಹಣ್ಣು ಹಿಡಿದು ಹೊರಬಂದ

ಅಷ್ಟರಲ್ಲಿ ಆಶ್ರಮಕ್ಕೆ ಹಿಂದಿರುಗಿದ ಶಂಖ ಎದುರಾದ ಲಿಖಿತ ಅಣ್ಣನಿಗೆ ಹಣ್ಣು ತೋರಿಸಿ ''ಹಣ್ಣು ಚೆನ್ನಾಗಿ ಪಕ್ವವಾಗಿವೆ'' ಎಂದು ಹೇಳಿದ ಶಂಖ ಸ್ವಲ್ಪ ನಿಷ್ಠುರ ಹಾಗೂ ನಿಯಮಪಾಲನೆಯಲ್ಲಿ ಕಟ್ಟುನಿಟ್ಟಿನ ಮನುಷ್ಯ ''ಅದಿರಲಿ ತಮ್ಮ! ಹಣ್ಣು ಯಾರ ತೋಟದ್ದು?'' ಎಂದು ಕೇಳಿದ

''ನಿನ್ನ ತೋಟದ್ದೇ ಈ ಹಣ್ಣುಗಳು!'' ಸಹಜವಾಗಿಯೇ ಉತ್ತರಿಸಿದ ಲಿಖಿತ

''ಹಣ್ಣು ಕಿತ್ತಿದ್ದಕ್ಕೆ ನನಗೆ ಬೇಸರವಿಲ್ಲ ಆದರೆ ನೀನು ಆ ತೋಟದ ಒಡೆಯನನ್ನು ಕೇಳದೆಯೇ ಕಿತ್ತಿರುವುದು ಸರಿಯೆ? ತೋಟದ ಒಡೆಯ ನಿನ್ನ ಸ್ವಂತ ಅಣ್ಣನೇ ಇರಬಹುದು ಕೇಳಿ ತೆಗೆಯುವುದು, ನಿನ್ನ ಧರ್ಮ ಹಾಗೆ ಮಾಡದೇ ತೆಗೆದಿರುವುದು ಕಳ್ಳತನವೇ ಸರಿ! ನನ್ನ ದೃಷ್ಟಿಯಲ್ಲಿ ನೀನೀಗ ಕಳ್ಳ ನಿನ್ನ ಅಪರಾಧಕ್ಕೆ ರಾಜನ ಬಳಿ ಹೋಗಿ ಕ್ಷಮೆಯಾಚಿಸಿ ಶಿಕ್ಷೆ ಪಡೆದು ಬಾ ಆಗಲೇ ನಿನ್ನ ಮುಖದರ್ಶನ!'' ಎಂದು ಹೊರಟೇಬಿಟ್ಟ

ಅಣ್ಣನ ಮಾತು ಲಿಖಿತನಿಗೆ ಸರಿಯೆನಿಸಿತು ತಾನು ಮಾಡಿದ ತಪ್ಪಿಗೆ ಪಶ್ಚಾತ್ತಾಪವಾಯಿತು ಅವನು ನೇರವಾಗಿ ರಾಜನ ಬಳಿಗೆ ನಡೆದ

ಮನೆಗೆ ಬಂದ ಋಷಿಕುಮಾರನನ್ನು ರಾಜ ಸತ್ಕರಿಸಿದ ಬಂದ ಕಾರಣ ಕೇಳಿದ ಬಯಸಿ ಬಂದುದನ್ನು ನೀಡುವುದಾಗಿ ಆಶ್ವಾಸನೆ ನೀಡಿದ

ದಾನವಾಗಿ ಬೇಡಿದ್ದನ್ನು ತಪ್ಪದೇ ಕೊಡಬೇಕೆಂದು ರಾಜನಿಂದ ಮಾತು ಪಡೆದ ಲಿಖಿತ ನಡೆದ ವೃತ್ತಾಂತವನೆಲ್ಲ ರಾಜನಿಗೆ ಹೇಳಿ ತನಗೆ ತಕ್ಕ ಶಿಕ್ಷೆ ನೀಡಬೇಕೆಂದ ರಾಜನಿಗೆ ಗೊಂದಲ ಗಾಬರಿಗಳಾದವು ರಾಜ ಸಾಕಷ್ಟು ಸಮಾಧಾನ ಹೇಳಿದ

ಲಿಖಿತ ಕೇಳಲಿಲ್ಲ

''ಈ ನನ್ನ ಅಪರಾಧಕ್ಕೆ ನಿಮ್ಮ ಆಡಳಿತದಲ್ಲಿ ಯಾವ ಶಿಕ್ಷೆ?'' ಎಂದು ಕೇಳಿದ

ರಾಜ ಸಂಕೋಚದಲ್ಲಿ ಉತ್ತರಿಸಿದ

''ಈ ತರಹ ಅಪರಾಧಕ್ಕೆ ನಾವು ಕೈಗಳನ್ನು ತುಂಡರಿಸುತ್ತೇವೆ''

''ಸರಿ ಹಾಗಾದರೆ ! ನನ್ನ ಕೈಗಳನ್ನು ತುಂಡರಿಸಿ ನನಗೆ ಶಿಕ್ಷೆ ನೀಡಿದರೆ ಮಾತ್ರ ನಾನು ಇಲ್ಲಿಂದ ಹೋಗುತ್ತೇನೆ ಇಲ್ಲವಾದರೆ, ನೀನು ಮಾತಿಗೆ ತಪ್ಪಿದಂತೆ ! ಜೋಕೆ''

ರಾಜನಿಗೆ ಉಭಯ ಸಂಕಟ ಮನಸ್ಸಿಲ್ಲದೇ ಭಟರಿಗೆ ಲಿಖಿತನ ಇಚ್ಛೆ ಪೂರೈಸುವಂತೆ ಹೇಳಿ ಕಳಿಸಿದ

ಹೀಗೆ ರಾಜನಿಂದ ಶಿಕ್ಷೆ ಪಡೆದು ಕೈ ಕಳೆದುಕೊಂಡು ಮುಂಡನಾಗಿ ಬಂದ ತಮ್ಮನನ್ನು ಕಂಡ ಶಂಖನಿಗೆ ದುಃಖವಾಯಿತು ಆದರೆ, ಅವನ ಪ್ರಾಮಾಣಿಕತೆಗೆ ಹೆಮ್ಮೆಯಾಯಿತು ಶಂಖ ತಮ್ಮನನ್ನು ಪ್ರೀತಿ ವಿಶ್ವಾಸಗಳಿಂದ ಎದಿರುಗೊಂಡ. ಹತ್ತಿರದ ನದಿಯಲ್ಲಿ ಸ್ನಾನ ಮಾಡಿ ಬರಲು ಹೇಳಿದ

ಸ್ನಾನಕ್ಕಾಗಿ ನದಿಯಲ್ಲಿ ಮುಳುಗಿ ಮೇಲೆದ್ದ ಲಿಖಿತನ ಕೈಗಳು ಮತ್ತೆ ಚಿಗುರಿದ್ದವು ಲಿಖಿತ ಶಿಕ್ಷೆ ಪಡೆದು ಪುನೀತನಾಗಿದ್ದ ಈಗ ಮತ್ತೆ ಕಡಿದ ಕೈಗಳನ್ನು ಹಿಂದೆ ಪಡೆದು ಪ್ರಾಮಾಣಿಕತೆಯ ಫಲ ಪಡೆದಿದ್ದ

ಇದು ಯುಧಿಷ್ಠಿರನಿಗೆ ವ್ಯಾಸರು ಹೇಳಿದ ಕತೆ. ಪ್ರಾಮಾಣಿಕತೆಯ ಕರ್ತವ್ಯನಿಷ್ಠೆಯ ಬೆಲೆ ಹೇಳುವ ಕತೆ. ನಮ್ಮನ್ನು ಆತ್ಮಾವಲೋಕನಕ್ಕೆ ಹಚ್ಚುವ ಕತೆ!

ಭಗವಂತನ ವಶಕ್ಕೆ ಒಳಪಟ್ಟ ಈ ಜಗದ ಪದಾರ್ಥಗಳನ್ನೆಲ್ಲ ನಮ್ಮದೇ ಎಂಬಂತೆ ಭಗವಂತನ ಮಾತು ಕೇಳದೇ ಸ್ವಕರ್ತವ್ಯವನ್ನು ಮಾಡದೇ, ಅವನಲ್ಲಿ ಅರ್ಪಿಸದೇ, ಭೋಗಿಸುವ ನಮ್ಮಲ್ಲಿ, ಶಿಕ್ಷೆ ಕೇಳಿ ಪಡೆಯುವುದಿರಲಿ, ಅಪರಾಧವನ್ನು ಒಪ್ಪಿಕೊಳ್ಳುವ ಪ್ರಾಮಾಣಿಕತೆಯಾದರೂ ಇದೆಯೇ?

ಅಷ್ಟೇ ಅಲ್ಲದೆ, ಎಷ್ಟು ದೊಡ್ಡ ಅಪರಾಧಗೈದರೂ ಲಂಚ ಆಮಿಷ ನೀಡಿ, ನ್ಯಾಯಾಲಯದಿಂದಲೇ ನಿರಪರಾಧಿಗಳೆಂದು ಸಾಬೀತುಪಡಿಸುವ ನಮ್ಮ ವಂಚನೆಯ ಪ್ರವೃತ್ತಿ ತಲೆ ತಗ್ಗಿಸುವಂತಹದು. ಸ್ವಾರ್ಥ-ಪ್ರತಿಷ್ಠೆಗಳಿಗಾಗಿ ಯಾವುದಕ್ಕೂ ಹೇಸದ ನಾವು ಆತ್ಮವಂಚಕ ನಾಗರಿಕರು! ಮಹಾಭಾರತಕ್ಕೂ ನಮಗೂ 5000 ವರ್ಷಗಳ ಅಂತರವಾದರೆ, ಮಹಾಭಾರತದ ಆದರ್ಶಕ್ಕೂ ನಮಗೂ 10,000 ವರ್ಷಗಳ ಅಂತರ!!

ಮಹಾಭಾರತ



# ಸಿದ್ಧಿಯ ರಹಸ್ಯ

ದಾರಿಯಲ್ಲಿ ಹೋಗುವ ಜನರೆಲ್ಲ ಅವನನ್ನೇ ಬೆಕ್ಕಸ ಬೆರಗಾಗಿ ನೋಡುತ್ತಿದ್ದರು

ಮಧ್ಯಾಹ್ನದ ಉರಿಬಿಸಿಲು, ಅವನು ನಡೆಯುತ್ತಿದ್ದ ಅವನ ತಲೆಯ ಮೇಲೆ ಬಾನಿನಲ್ಲಿ ಛತ್ರವೊಂದು ಮೆಲ್ಲನೆ ನೆರಳ ನೀಡುತ್ತಾ ಸಾಗುತ್ತಿತ್ತು ಅಕ್ಕಪಕ್ಕದಲ್ಲಿ ಚಾಮರಗಳು ತಾವೇ ಬೀಸುತ್ತಿದ್ದವು ಅವನಿಡುವ ಹೆಜ್ಜೆಗಳಿಗೆ ದಾರಿಯಲ್ಲಿ ಮೆದು ಹುಲ್ಲಿನ ಹಾಸು ಹುಟ್ಟುತ್ತಿತ್ತು ಕಂಪಿನ ಹೂಗಳು ಹರಡುತ್ತಿದ್ದವು ಅವನ ಮುಖ ಅಹಂಭಾವದಿಂದ ಬೀಗುತ್ತಿತ್ತು ಇಕ್ಕೆಲೆಗಳಲ್ಲಿ ನೆರೆದ ಜನರತ್ತ ಜಂಬದ ನೋಟ ಬೀರುತ್ತ ಅವ ಸಾಗುತ್ತಿದ್ದ

ತಟ್ಟನೆ ಅವನಿಗೆ ಎಚ್ಚರವಾಯಿತು ಇಂತಹ ಸಿದ್ಧಿಗಳನ್ನು ಕೈವಶ ಮಾಡಿಕೊಳ್ಳುವ ಹಗಲುಗನಸು ಕಾಣುತ್ತಿದ್ದ ಅವನು

★★★

ಅವನೊಬ್ಬ ಬ್ರಾಹ್ಮಣಕುವರ ಹೆಸರು 'ಕೌಶಿಕ' ಅವನಿಗೆ ದೇವರನ್ನು ಕಾಣುವ ಹಂಬಲ, ಸಿದ್ಧಿಗಳ ಹುಚ್ಚು ಬಯಕೆ ಮನೆಯಲ್ಲಿ ಮುಪ್ಪಿನ ತಂದೆ-ತಾಯಿ ಅವನಿಗೆ ಅಡ್ಡಿ, ಅವರೆಂದರೆ ಅವನಿಗೆ ಅಸಡ್ಡೆ! ತನ್ನ ಹಿರಿದಾದ ಗುರಿಯ ದಾರಿಗೆ ಅವರೊಂದು ಮುಳ್ಳೆಂದು ಅವನ ಭಾವನೆ!!

ಅದಕ್ಕೆಂದೇ, ಅವರನ್ನು ಕಡೆಗಣಿಸಿ, ದೇವರನ್ನು ಅರಸಿ, ಕಾಡಿಗೆ ತೆರಳಿದ ನದೀತೀರದ ಪ್ರಶಾಂತ ಪರಿಸರ ಆರಿಸಿಕೊಂಡು, ನಿದ್ದೆ- ನೀರು - ಆಹಾರ - ವಿಹಾರವನ್ನೆಲ್ಲ ತೊರೆದ ಅಖಂಡ ಧ್ಯಾನದಲ್ಲಿ ಮುಳುಗಿದ ಹೊರಜಗದ ಪರಿವೆಯಿಲ್ಲದ ಅವನ ತಪ ಸಾಗಿತು ಕಾಲ ಉರುಳಿತು ಕೊನೆಗೊಮ್ಮೆ ಏಕಾಗ್ರ-ಉಗ್ರ ತಪಸ್ಸಿಗೆ ಮಂತ್ರಗಳು ವರ ನೀಡಿದವು ಸಿದ್ಧಿಗಳು ಕೈವಶವಾದವು

'ಕೌಶಿಕ' ಬಯಸಿದರೆ ಸಾಕು ಆ ಎಲ್ಲ ಅವನ ''ಬೇಕು''ಗಳು

ಅವನಡಿಗೆ ಬೀಳುತ್ತಿದ್ದವು ಅವನು ಸಿದ್ಧಪುರುಷನಾದ ಅವನ ತಪಃಪ್ರಭಾವದ ಜೊತೆ ಅವನ ಜಟೆ-ಗಡ್ಡಗಳೂ ಬೆಳೆದವು ಅಹಂಕಾರವೂ ಬೆಳೆಯಿತು!

★★★

ಕೌಶಿಕ ತಪಗೈಯುವ ಸ್ಥಳದಲ್ಲಿ ಒಂದು ದೊಡ್ಡ ಆಲದಮರ ಅದರಲ್ಲೊಂದು ಜೋಡು ಹಕ್ಕಿಯ ಗೂಡು

ಆ ದಿನ ಕೌಶಿಕ ದೀರ್ಘ ಧ್ಯಾನದಲ್ಲಿ ತೊಡಗಿದ್ದ ಹಕ್ಕಿಯ ಗೂಡಿನಿಂದ ಅವನ ಮೇಲೆ ಕೊಳೆ ಬಿದ್ದಿತು ಅವನಿಗೆ ಪಿತ್ತ ನೆತ್ತಿಗೇರಿತು

''ತನ್ನಂತಹ ಮಹಾತಪಸ್ವಿಯ ಮೇಲೆ ಅಶುದ್ಧಿ ಮಾಡುವುದೆಂದರೇನು? ಧ್ಯಾನದಲ್ಲಿರುವಾಗ ಮೈಲಿಗೆ ಮಾಡುವುದೆಂದರೇನು? ಅಪರಾಧಿಗಳನ್ನು ಸುಮ್ಮನೆ ಬಿಡಲಾರೆ'' ಎಂದುಕೊಳ್ಳುತ್ತಾ ಕೌಶಿಕ ಹಕ್ಕಿಯತ್ತ ಕೆಂಗಣ್ಣು ಬೀರಿದ

ಮರುಕ್ಷಣ ಗಂಡು ಹಕ್ಕಿ ಉರಿಯುತ್ತಾ ನೆಲಕ್ಕೆ ಬಿದ್ದು ಬೂದಿಯಾಯಿತು ಅದನ್ನು ಕಂಡು ಹೆಣ್ಣು ಹಕ್ಕಿ ಚೀತ್ಕಾರ ಮಾಡುತ್ತಾ ದುಃಖದಿಂದ ಒದ್ದಾಡಿ ಪ್ರಾಣ ಬಿಟ್ಟಿತು ಆಗ ಕೌಶಿಕನ ''ಅಹಂ'' ತೃಪ್ತಿಯಿಂದ ಶಾಂತವಾಯಿತು ಅವನಿಗೆ ತನ್ನ ತಪಃಶಕ್ತಿಯ ಬಗೆಗೆ ಮತ್ತಷ್ಟೂ ಹಮ್ಮು ಬೆಳೆಯಿತು

★★★

ಈ ದಿನ ಹೊಳೆಯಲ್ಲಿ ಮಿಂದ ನಂತರ ಅವನ ಬಟ್ಟೆಗಳು ಒಣಗಲಿಲ್ಲ ಅವನೆಣಿಸಿದಂತೆ ಗಾಳಿ ಬೀಸಲಿಲ್ಲ, ದಾರಿಯಲ್ಲಿ ಹುಲ್ಲಿನ ಹಾಸು ಹುಟ್ಟಲಿಲ್ಲ ಅವನಿಗೆ ದಿಗ್ಭ್ರಮೆಯಾಯಿತು ಮುಖ ಕಳೆಗುಂದಿತು ಅವನು ಚಿಂತೆಗೀಡಾದ ಮನದಲ್ಲಿ ಏಕಾಗ್ರತೆಯೇ ಇಲ್ಲ ನಾಲಿಗೆ ತೊದಲುತ್ತಿದೆ, ಮಂತ್ರಗಳು ಮರೆಯುತ್ತಿವೆ, ಮೈ ನಡುಗುತ್ತಿದೆ ಬಾಯಾರಿ ನೀರಡಿಕೆಯಾಯಿತು ಹಸಿವೆಯಾಯಿತು

ಇಂದು ಅವನು ಬಯಸಿದಂತೆ ಆಹಾರಸಾಮಗ್ರಿ ಒದಗಿ ಬರಲಿಲ್ಲ. "ಏಕೆ ಹೀಗಾಯಿತು? ನನ್ನ ತಪಃ ಪ್ರಭಾವ ಎಲ್ಲಿ ಹೋಯಿತು?" ಅವನಿಗೆ ದಿಕ್ಕೇ ತೋಚಲಿಲ್ಲ. ಚಿಂತೆ-ಅಸಹನೆ-ಕೋಪದಲ್ಲೇ ಹತ್ತಿರದ ಹಳ್ಳಿಯತ್ತ ಹೆಜ್ಜೆ ಹಾಕಿದ.

★★★

ಅದೊಂದು ಸದ್ಗೃಹಸ್ಥನ ಮನೆ, ಹಸಿದು ಕಂಗಾಲಾದ ಕೌಶಿಕ ಮನೆಯಂಗಳದಿ ಬಂದು ನಿಂತ. ಮನೆಯೊಡತಿ ಅವನಿಗೆ ಭಿಕ್ಷೆ ನೀಡುವುದಾಗಿ ಹೇಳಿ ಒಳನಡೆದಳು. ಕೆಲ ನಿಮಿಷಗಳು ಕಳೆದವಷ್ಟೆ! ಕೌಶಿಕ ಚಡಪಡಿಸಿದ. ಸ್ವಲ್ಪ ಸಮಯ ಕಳೆಯಿತು. ಮನೆಯೊಡತಿ ಹೊರ ಬರಲಿಲ್ಲ! ಕೌಶಿಕನಿಗೆ ಒಂದೊಂದು ಕ್ಷಣವೂ ಯುಗವಾಯಿತು. ಅತ್ತಿತ್ತ ಶತಪಥಗೈದ. "ತನ್ನಂತಹ ಮಹಾನ್ ತಪಸ್ವಿ-ಬ್ರಾಹ್ಮಣ ಮನೆಯೆದುರು ಹಸಿದು ಭಿಕ್ಷೆಗಾಗಿ ನಿಂತಾಗ ಹೊರಬರದೇ ವಿಳಂಬ ಮಾಡುತ್ತಾ ಕಾಯಿಸುತ್ತಿರುವುದು ಸಣ್ಣ ಅಪರಾಧವೇ?" ಮನಸ್ಸು ವ್ಯಗ್ರವಾಯಿತು. ಉದ್ವಿಗ್ನತೆಯಿಂದ ಹುಂಕರಿಸಿದ. ಕೂಗಿದ. ಕೊನೆಗೆ ಮನೆಯೊಡತಿ ಭಿಕ್ಷಾಪಾತ್ರೆಯೊಡನೆ ಹೊರಬಂದಳು. ಕೋಪದಲ್ಲಿ ಭುಸುಗುಡುತ್ತಿದ್ದ ಮುನಿಯ ಬಳಿ ಬಂದು ತಣ್ಣೀರು ನೀಡಿದಳು.

"ಮನೆಯೊಳಗೆ ನನ್ನ ಪತಿಯ ಭೋಜನ ನಡೆದಿತ್ತು. ಮಗುವಿನ ಆರೈಕೆ ಮಾಡಬೇಕಿತ್ತು. ಅದಕ್ಕಾಗಿ ತಮಗೆ ಭಿಕ್ಷೆ ನೀಡುವಲ್ಲಿ ವಿಳಂಬವಾಯಿತು. ತಾವು ದಯಮಾಡಿ ಕ್ಷಮಿಸಿ. ಭಿಕ್ಷೆ ಸ್ವೀಕರಿಸಬೇಕು"

ಅವಳ ಮಾತಿನಲ್ಲಿ ನಮ್ರತೆಯ ಪ್ರಾರ್ಥನೆಯಿತ್ತು.

ಕೌಶಿಕನ ಕೋಪದ ಉರಿ ಆರಲಿಲ್ಲ. ಆ ಗೃಹಿಣಿಯತ್ತ ಕೆಂಗಣ್ಣು ಬೀರಿದ. "ಬಾಗಿಲ ಬಳಿ ಹಸಿದು ಕಾಯುತ್ತಿರುವ ನನ್ನಂತಹ ಅತಿಥಿಗಿಂತ ಹೆಚ್ಚಾಯಿತೇ ನಿನ್ನ ಮನೆಗೆಲಸ? ನಾನು ಯಾರೆಂದು ತಿಳಿದಿರುವೆ? ನನ್ನ ತಪಃಶಕ್ತಿಯ ಅರಿವು ನಿನಗಿದ್ದಂತಿಲ್ಲ. ಪಾಪ ನಿನಗೇನು ಗೊತ್ತು? ನನ್ನಂತಹ ತಪಸ್ವಿಗಳ ಪ್ರಭಾವ! ನಾನು ಮನಸ್ಸು ಮಾಡಿದರೆ... ನಿನ್ನನ್ನು ಈ ಕ್ಷಣ..."

''ಸುಟ್ಟು ಬಿಡುವಿರಾ?'' ಅವಳು ಅವನ ಮಾತನ್ನು ತುಂಡರಿಸಿದಳು

''ಅಯ್ಯೋ! ತಪಸ್ವಿ! ಒಂದೇ ಕ್ಷಣದಲ್ಲಿ ನಿನ್ನ ಕೆಂಗಣ್ಣನೋಟದಿಂದ ಸುಟ್ಟುಹೋಗಲು ನಾನೇನು ಹಕ್ಕಿಯಲ್ಲ ತಿಳಿಯಿತೇ?''

ಕೌಶಿಕನಿಗೆ ಅಚ್ಚರಿಯಾಯಿತು ಕೋಪವೆಲ್ಲ ಜರ್ರನೇ ಇಳಿಯಿತು ಕಾಡಿನಲ್ಲಿ ನಡೆದ ಘಟನೆ ಇವಳಿಗೆ ಹೇಗೆ ತಿಳಿಯಿತು? ಅವನಿಗೆ ಮಾತೇ ಹೊರಡಲಿಲ್ಲ

''ಅಯ್ಯೋ! ಕೌಶಿಕ! ನಿನ್ನನ್ನು ನೀನು ಮಹಾತಪಸ್ವಿಯೆಂದು ತಿಳಿದಿರಬಹುದು ನೀನು ಗಳಿಸಿದ ಸಿದ್ಧಿಗಳು ಓರ್ವ ಮಾಂತ್ರಿಕ ಮಾಡುವ ಯಕ್ಷಿಣಿಯ ತಂತ್ರಗಳು! ಅದಕ್ಕಿಂತ ಹೆಚ್ಚೇನು ಗಳಿಸಿರುವೆ?

ಮನೆಯಲ್ಲಿ ವಯಸ್ಸಾದ ತಂದೆ-ತಾಯಿಗಳ ತೊರೆದು, ಕಾಡಿಗೆ ಹೋದ ನಿನಗೆ ದೇವರು ದೊರಕಿದನೇ? ತಪಸ್ಸು, ಅದರಿಂದ ಪಡೆದ ಅಲ್ಪಸ್ವಲ್ಪ ಸಿದ್ಧಿಯಲ್ಲೇ ಮೈಮರೆತೆ ಸಿದ್ಧಿಗಳ ಆಮಿಷಕ್ಕೆ ಬಲಿಯಾದೆ ಹೊರಗೆಲ್ಲ ಶುದ್ಧನಾಗಿ ಮನದೊಳಗೆಲ್ಲ ಮೈಲಿಗೆ ಬೆಳೆಸಿದೆ

ತಪಸ್ಸಿನಿಂದ ಅಮಾಯಕ ಹಕ್ಕಿಯನ್ನು ಸುಟ್ಟೆ ನಿನ್ನೊಳಗಿನ ಕಾಮ-ಕ್ರೋಧಗಳನ್ನು ಸುಡಲಾಗಲಿಲ್ಲ ನಿನಗೆ ಉಪದೇಶಿಸಲು ನನಗೆ ಸಮಯವೂ ಇಲ್ಲ ನಾನು ಅಷ್ಟು ಹಿರಿಯಳೂ, ತಿಳಿದವಳೂ ಅಲ್ಲ ಇಗೋ, ಈ ಭಿಕ್ಷೆ ಸ್ವೀಕರಿಸು

ಮನೆಗೆ ಬಂದ ನಿನ್ನ ಆತಿಥ್ಯದಲ್ಲಿ ವಿಳಂಬವಾದುದಕ್ಕೆ ಕ್ಷಮೆ ಇರಲಿ'' ಎಂದು ಶಾಂತವಾಗಿ ನುಡಿದಳು

ಈ ಮಾತುಗಳನ್ನು ಕೇಳಿ ಕೌಶಿಕ ಮತ್ತೂ ಚಕಿತನಾದ ಅವನ 'ಅಹಂ' ಕರಗಿತು ಕಾಡಿನಲ್ಲಿ ತಪಗೈದು ಗಳಿಸಲಾಗದ ಈ ಅಪರೋಕ್ಷ ದೃಷ್ಟಿಯ ಸಿದ್ಧಿ ಈ ಸಾಧಾರಣ ಹೆಂಗಸಿಗೆ ಹೇಗೆ ಬಂತು?

''ಅಮ್ಮ! ನಿನ್ನ ಮಾತು ಕೇಳಿ ನನಗೆ ತುಂಬ ಆಶ್ಚರ್ಯವಾಗುತ್ತಿದೆ ನಿಜ ಹೇಳು! ಕಾಡಿನಲ್ಲಿ ವೃದ್ಧ ತಪಸ್ವಿಗಳಿಗೂ ದೊರೆಯದ ಈ

ಅಪರೋಕ್ಷವಿದ್ಯೆ ನಿನಗೆ ಹೇಗೆ ಬಂತು? ಎಲ್ಲಿಂದ ಬಂತು? ಈ ರಹಸ್ಯ ಹೇಳಿದರೆ ಮಾತ್ರ ನಾನು ತೃಪ್ತಿಯಿಂದ ಹಿಂದಿರುಗುವೆ'' ಎಂದು ಪಟ್ಟುಹಿಡಿದ

ಅದನ್ನು ಕೇಳಿದ ಅವಳು ನಸುನಗುತ್ತಾ ''ನಾನೇನು ದೊಡ್ಡ ತಪಸ್ವಿಯಲ್ಲ! ಅದಾವ ಸಿದ್ಧಿಗಾಗಿ ಪ್ರಯತ್ನಿಸಿ ಗಳಿಸಿಯೂ ಇಲ್ಲ ನಿನ್ನ ಕಂಡಾಗ ನನ್ನ ಮನದಲ್ಲಿ ಬಂದುದನ್ನು ಹೇಳಿದೆ ಅಷ್ಟೆ ! ನಿನ್ನೆಲ್ಲ ಪ್ರಶ್ನೆಗಳಿಗೆ ಉತ್ತರಬೇಕೆಂದರೆ, ವೇಟೆಯಲ್ಲಿ 'ಅದ್ರೋಹಕ' ಎಂಬ ಬೇಡನೋರ್ವ ಇದ್ದಾನೆ ಅವನಲ್ಲಿಹೋಗು ನಿನ್ನೆಲ್ಲಪ್ರಶ್ನೆಗಳಿಗೆ ಅಲ್ಲಿದೆ ಉತ್ತರ''

ಇಷ್ಟುನುಡಿದು ಅವಳು ಮನೆಯೊಳಕ್ಕೆ ನಡೆದಳು ಕೌಶಿಕ ಅವಳನ್ನು ತಡೆದು ನಿಲ್ಲಿಸಿದ ಅವಳ ಅಡಿಗೆ ಬಿದ್ದುನಮಿಸಿದ ಅಲ್ಲಿಂದ ಬೇಡನ ಮನೆ ಅರಸಿ ಹೊರಟ

★★★

ಮನೆಯೆದುರು ತೂಗುಬಿಟ್ಟ ಪ್ರಾಣಿಗಳ ಮಾಂಸ, ಒಣಗಲು ಬಿಸಿಲಿಗೆ ಹರಡಿದ್ದ ಚರ್ಮಗಳು, ಹೊಟ್ಟೆಯೆಲ್ಲತೊಳಸುವ ಅಸಹ್ಯ ವಾಸನೆ ಇವೆಲ್ಲ ಬೇಡನ ಮನೆಯೆಂದು ಸಾರಿ ಹೇಳುತ್ತಿದ್ದವು ಒಳಗೆ ಕಾಲಿಡಲು ಕೌಶಿಕ ಹಿಂಜರಿದ ಅಷ್ಟರಲ್ಲೇ, ಅವನನ್ನುನೋಡಿದ ಬೇಡ ತುಂಬ ಗೌರವ ಆದರಗಳೊಂದಿಗೆ ಸ್ವಾಗತಿಸಿದ ಕಾಲಿಗೆ ನೀರೆರೆದ ಆಸನವಿತ್ತು ಆದರಿಸಿದ ಅಂತಹ ಅಸಹ್ಯ ಪರಿಸರದಲ್ಲೂ ಆ ಬೇಡನ ಪ್ರೀತಿಯ ಸತ್ಕಾರ ಅವನನ್ನು ಸೆಳೆಯಿತು ಕುಳಿತಲ್ಲೇ ಮನೆಯ ವ್ಯವಹಾರ ಗಮನಿಸಿದ ಮನೆಯ ಒಂದೆಡೆಯಲ್ಲಿ ಮಾಂಸದ ಅಂಗಡಿ ಜನರೆಲ್ಲ ಮಾಂಸವನ್ನು ಖರೀದಿಸಲು ನೇರಿದ್ದರು ಬಂದ ಎಲ್ಲ ಗ್ರಾಹಕರೊಂದಿಗೂ ಬೇಡ ಸೌಜನ್ಯದಿಂದ ವರ್ತಿಸುತ್ತಿದ್ದ ಮನೆಯ ಒಳ ಭಾಗದಲ್ಲಿ ಮಂಚದ ಮೇಲೆ ವೃದ್ಧರಾದ ದಂಪತಿಗಳಿದ್ದರು ಅವರು ಬೇಡನ ತಂದೆ-ತಾಯಿ ಇರಬಹುದೆಂದುಕೊಂಡ ಕೌಶಿಕ ಅವರು ಕರೆದಾಗಲೆಲ್ಲ, ಬೇಡ ಮತ್ತು

ಅವನ ಮಡದಿ ಬಂದು ಉಪಚರಿಸುತ್ತಿದ್ದರು

ಸ್ವಲ್ಪ ಹೊತ್ತು ಕಳೆಯಿತು ಮಾಂಸ ಖರೀದಿಸಲು ಬಂದಿದ್ದ ಗ್ರಾಹಕರನ್ನೆಲ್ಲ ಕಳುಹಿಸಿ, ಬೇಡ ತನ್ನೆಲ್ಲ ಕರ್ತವ್ಯ ಪೂರೈಸಿ ಕೌಶಿಕನೆಡೆಗೆ ಬಂದು ಕುಳಿತ ತಾನೇ ಮಾತಿಗಾರಂಭಿಸಿದ

''ಅಯ್ಯೋ! ವಿಪ್ರೋತ್ತಮ! ನಿನ್ನಂತಹ ಅತಿಥಿ ಈ ಬಡ ಬೇಡನ ಮನೆಗೆ ಬಂದಿರುವುದು ನನಗೆ ಬಹಳ ಸಂತಸ ತಂದಿದೆ ನಿನ್ನನ್ನು ಆ ಸಾಧ್ವಿಯೇ ನನ್ನ ಮನೆಗೆ ಕಳಿಸಿರುವಳಲ್ಲವೇ? ನೀನು ನಿನ್ನ ಮನದಲ್ಲಿ ಜಿಜ್ಞಾಸೆಗಳನ್ನು ಹೊತ್ತು ಬಂದಿರುವಿ ನಿನ್ನೆಲ್ಲ ಪ್ರಶ್ನೆಗಳಿಗೆ ಸಂದೇಹಗಳಿಗೆ ಈಗಾಗಲೇ ಉತ್ತರ ದೊರಕಿರಲು ಸಾಕು''

ಕೌಶಿಕನಿಗೆ ಈಗ ಮತ್ತಷ್ಟೂ ಗೊಂದಲವಾಯಿತು ಈ ಬೇಡನೂ ಸಿದ್ಧಪುರುಷ ! ಆ ಸಾಧ್ವಿಯು ನನ್ನನ್ನು ಇಲ್ಲಿಗೆ ಕಳುಹಿಸಿದ ವಿಷಯ ಈತನಿಗೆ ಹೇಗೆ ತಿಳಿಯಿತು?! ಬೆರಗಾಗಿ ಅವನತ್ತ ನೋಡಿದ

ಬೇಡ ಮತ್ತೆ ಹೇಳಿದ

''ಇದರಲ್ಲಿ ಅಚ್ಚರಿಪಡಲು ರಹಸ್ಯವೇನಿಲ್ಲ ಇಂತಹ ಸಿದ್ಧಿಗಳನ್ನು ಅರಸಿ ಕಾಡಿಗೆ ಹೋಗಬೇಕಿಲ್ಲ ದೇವರನ್ನು ಕಾಡಿನಲ್ಲಿ ಹುಡುಕಬೇಕಿಲ್ಲ ನೋಡು ನಿನ್ನ ದೇವರು ನಿನ್ನೊಳಗೇ ಇದ್ದಾನೆ ತಂದೆ-ತಾಯಿಯ ರೂಪದಲ್ಲಿ ಹೊರಗಡೆ ಇದ್ದಾನೆ ನನ್ನ ತಂದೆ-ತಾಯಿಗಳೇ ನನ್ನ ದೇವಪೂಜೆಯ ಪ್ರತಿಮೆಗಳು ನನ್ನ ವ್ಯಾಪಾರದ ತಕ್ಕಡಿಯಲ್ಲಿ ದೇವರ ಸಾನ್ನಿಧ್ಯವಿದೆ ನನ್ನ ಕುಲಧರ್ಮವಾದ ಮಾಂಸದ ವ್ಯಾಪಾರವೇ ನನ್ನ ದೇವಪೂಜೆ ಇದಕ್ಕಿಂತ ಹೆಚ್ಚಿನ ಯಾವ ತಪಸ್ಸನ್ನೂ ನಾನು ಮಾಡಿಲ್ಲ ಮಾಡುವುದೂ ಇಲ್ಲ ನನ್ನ ವೃತ್ತಿಧರ್ಮವನ್ನೇ ತಪವೆಂದು ಬಗೆದಿರುವೆ

ನೀನು ನಿನ್ನ ಮನೆಯಲ್ಲಿ ಹಾಸಿಗೆ ಹಿಡಿದ ತಂದೆತಾಯಿಯರನ್ನು ತೊರೆದು ದೂರ ಮಾಡಿ ಕಾಡಿಗೆ ಹೋದೆ ನದಿಯ ಪಾತ್ರದ ಮರಳಹಾಸಿನಲ್ಲಿ ತೋಡಿದರೆ ನೀರು ದೊರಕೀತು ಒಣ

ಮರುಭೂಮಿಯಲ್ಲಿ ಅದೆಷ್ಟು ನೆಲ ಬಗೆದರೇನು? ತೋಡಿದಷ್ಟೂ ಮರಳೇ! ದೊಡ್ಡ ದೀಪದ ಕೆಳಗೇ ಕಣ್ಣು ಕಟ್ಟಿಕೊಂಡು ಬೆಳಕಿಗಾಗಿ ತಡಕಾಡುತ್ತಿರುವೆ

ಕಾಡಿನಲ್ಲಿ ಬಹುಕಾಲ ಕಷ್ಟಪಟ್ಟು ತಪಸ್ಸಿನ ಸಿದ್ಧಿಗಳಿಸಿದೆ ಕೇವಲ 'ಅಹಂ'ನ ಕೆಟ್ಟ ತೃಪ್ತಿಗಾಗಿ ನಿರಪರಾಧಿ ಅಮಾಯಕ ಹಕ್ಕಿಯ ಕೊಂದೆ ಕೊಲೆಯ ಪಾತಕ ನಿನ್ನ ಬೆನ್ನಟ್ಟಿತು ತಪಸ್ಸೆಲ್ಲ ಸೋರಿಹೋಯಿತು ನಿನ್ನ ಜಟೆ-ಗಡ್ಡ ಮೀಸೆಗಳ ಜೊತೆಗೆ ಕಾಮ-ಕ್ರೋಧಗಳ ಬೆಳೆಸಿಕೊಂಡೆ ಬ್ರಹ್ಮತೇಜಸ್ಸು ಕಳೆದುಕೊಂಡೆ

ಧರ್ಮ ತುಂಬ ಸೂಕ್ಷ್ಮ ಮತ್ತು ಸಂಕೀರ್ಣವಾದುದು ನೀನು ಮಾಡಿದ ಹಕ್ಕಿಯ ಹತ್ಯೆ ಅದೊಂದು ಕೊಲೆ-ಅಧರ್ಮ ಆದರೆ, ನಾನು ಪ್ರತಿನಿತ್ಯ ಮಾಡುವ ಪ್ರಾಣಿಗಳ ಹತ್ಯೆ ಧರ್ಮ! ಪ್ರಾಣಿಗಳ ಹತ್ಯೆಯಲ್ಲಿ ನನಗೆ ಕೇವಲ ಸ್ವಾರ್ಥವಿಲ್ಲ ಇದು ನನ್ನ ಕುಲಧರ್ಮ! ನೀನು ಮಾತ್ರ ಕೇವಲ ಹಿಂಸೆಯ ನೀಚ ಸಂತಸಕ್ಕಾಗಿ ಹಕ್ಕಿಯನ್ನೂ ಸುಟ್ಟು ಹಾಕಿದೆ ಮತ್ತೆ ನಿನ್ನ ಸಾಮರ್ಥ್ಯಕ್ಕೆ ಬೀಗಿದೆ ಅದು ನೀ ಮಾಡಿದ ಕುಕರ್ಮ!!

ಆದುದರಿಂದ, ಬಿಡು ಬಿಟ್ಟುಬಿಡು ಈ ಎಲ್ಲ ಸಾಹಸಗಳನ್ನು, ಮನೆಗೆ ಹಿಂದಿರುಗು . ಸಂಸಾರಿಯಾಗು ತಂದೆ-ತಾಯಿಗಳ ಸೇವೆ ಮಾಡು ಅವರಲ್ಲಿ ದೇವರ ಕಾಣು ನಿನ್ನ ಪಾಲಿನ ಕರ್ತವ್ಯ ಮಾಡು ಅದೇ ದೇವನೊಲುಮೆಯ ದಾರಿ ಅದೇ ನಿನ್ನ ತಪಸ್ಸು

ಆಗ ನೀ ಬಯಸದಿದ್ದರೂ, ಸಿದ್ಧಿಗಳು ನಿನ್ನನರಸಿಕೊಂಡು ಬರುತ್ತವೆ ಹೋಗು ದೇವರು ನಿನಗೆ ಒಳ್ಳೆಯದನ್ನು ಮಾಡಲಿ ಇದೋ ಬ್ರಾಹ್ಮಣನಾದ ನಿನಗೆ ನನ್ನ ಪ್ರಣಾಮಗಳು''

ಕೌಶಿಕನ ಕಣ್ಣು ತೆರೆಯಿತು ತನ್ನ ಮನೆಯ ಹಾದಿ ಹಿಡಿದ ಕೌಶಿಕ

- ಮಹಾಭಾರತ

**'ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಹಿ ಪರಮೋ ಧರ್ಮಃ'**
**ಶ್ರೀಮದಾನಂದತೀರ್ಥಭಗವತ್ಪಾದರು**

# ನಾಯಿ ನೀಡಿದ ದಂಡ

ರಾಮರಾಜ್ಯದ ಒಂದು ಘಟನೆ

ಚಕ್ರವರ್ತಿ ಶ್ರೀರಾಮಚಂದ್ರ ನ್ಯಾಯಸ್ಥಾನದಲ್ಲಿ ಕುಳಿತಿದ್ದಾನೆ ನಾಯಿಯೊಂದು ಕಣ್ಣೀರಿಡುತ್ತಾ ಬಂದಿತು ಸನ್ಯಾಸಿಯೊಬ್ಬ ವಿನಾಕಾರಣ ತನ್ನನ್ನು ಹೊಡೆದನೆಂದು, ಅದಕ್ಕಾಗಿ ಆ ಸಂನ್ಯಾಸಿಗೆ ದಂಡನೆ ನೀಡಿ ತನಗೆ ನ್ಯಾಯ ಒದಗಿಸಬೇಕೆಂದು ಆ ನಾಯಿ ನಿವೇದಿಸಿತು.

ನಾಯಿಗೆ ಅನ್ಯಾಯವೆಸಗಿದ ಆ ಸನ್ಯಾಸಿಯನ್ನು ಸಭೆಗೆ ಕರೆತರಲಾಯಿತು ಸಂನ್ಯಾಸಿ ತನ್ನ ತಪ್ಪನ್ನು ಒಪ್ಪಿಕೊಂಡು, ಶಿಕ್ಷೆ ಪಡೆಯಲು ಒಪ್ಪಿದ ಅವನಿಗೆ ತಕ್ಕ ದಂಡನೆಯನ್ನು ವಿಧಿಸಲು ಶ್ರೀರಾಮಚಂದ್ರ ನಾಯಿಗೇ ಹೇಳಿದ ''ಈ ಸಂನ್ಯಾಸಿಗೆ ಏನು ಶಿಕ್ಷೆ ವಿಧಿಸಬೇಕು? ನೀನೇ ಹೇಳು'' ನಾಯಿ ಯೋಚಿಸಿ ಉತ್ತರಿಸಿತು

''ರಾಜನ್, ಇವನಿಗೆ ಕುಲಾಧಿಪತಿಯ ಪದವಿ ನೀಡು ಅದೇ ಅವನಿಗೆ ಶಿಕ್ಷೆ!''

ಎಲ್ಲರಿಗೂ ಆಶ್ಚರ್ಯವೇ ಆಶ್ಚರ್ಯ! ಕುಲಾಧಿಪತಿಯ ಸ್ಥಾನ ಶಿಕ್ಷೆಯೆ? ನಾಯಿಯೇ ಮತ್ತೆ ವಿವರಿಸಿತು

''ಹಿಂದೆ ನಾನೂ ಕುಲಾಧಿಪತಿಯ ಸ್ಥಾನದಲ್ಲೇ ಇದ್ದೆ ಆ ಪದವಿಯಲ್ಲಿದ್ದು ಅವ್ಯವಹಾರ ನಡೆಸಿದೆ ಅದರಿಂದಾಗಿಯೇ ನನಗೆ ಈ ನಾಯಿಯ ಪಾಡು ಈ ಸನ್ಯಾಸಿಯೇ ಈಗ ಕುಲಪತಿ ಸ್ಥಾನವನ್ನೇರಿದರೆ, ಅವನೂ ನನ್ನಂತೆ ನಾಯಿಯ ಜನ್ಮ ಪಡೆಯುವನಲ್ಲವೇ?''

ಇದು ನಾಯಿಯ ಊಹೆ!

ಈ ನಾಯಿಯ ಕತೆ, ಪೀಠಾಧಿಪತಿಗಳು, ದೇವಾಲಯದ ಅಧಿಕಾರಿಗಳು, ಸಾರ್ವಜನಿಕ ಸಂಸ್ಥೆಗಳ ಪದಾಧಿಕಾರಿಗಳು, ಮಂತ್ರಿಗಳು, ಎಷ್ಟು ಜಾಗರೂಕವಾಗಿ ವರ್ತಿಸಬೇಕೆಂಬುದನ್ನು ತೋರಿಸುತ್ತದೆ

ರಾಮರಾಜ್ಯದಂತಹ ಧರ್ಮರಾಜ್ಯದಲ್ಲೇ 'ಅಧಿಕಾರ'ದ ಪದವಿಯಲ್ಲಿ ಭ್ರಷ್ಟಾಚಾರ ಸುಳಿದಾಡಿದಾಗ, ಇನ್ನು ಕಲಿಯುಗದ 'ಅಧಿಕಾರ' ಸ್ಥಾನದ ಬಗೆಗಂತೂ ಕೇಳುವುದೇ ಬೇಡ!

ಮಠಾಧಿಪತಿಗಳು, ಅಧಿಕಾರಿಗಳು - ಸಾರ್ವಜನಿಕ ಆಸ್ತಿ-ಐಶ್ವರ್ಯಗಳ ಟ್ರಸ್ಟಿಗಳಾಗಿರಬೇಕೇ ಹೊರತು ''ಥರ್ಸ್ಟಿ''ಗಳಾಗಬಾರದು!!

**-ರಾಮಾಯಣ**



# ದಟ್ಟಡವಿಯ ದಾರಿ

ದಟ್ಟ ಕಾಡು ಸೂರ್ಯನ ಕಿರಣಗಳೂ ಸುಳಿಯದಂತೆ ತಡೆಯುವ ನಿಬಿಡವಾಗಿ ಹೆಣೆದುಕೊಂಡ ಮರಗಳು ಒಂದು ಹೆಜ್ಜೆಯನ್ನೂ ಮುಂದಿಡಲಾಗದಂತೆ ಗಿಡ-ಬಳ್ಳಿಗಳಿಂದ ತುಂಬಿದ ನೆಲ ಬರೀ ಪ್ರಾಣಿಗಳ ಕೂಗಿನ ಸದ್ದು ಅಂತಹ ಭಯಾನಕ ಕಾಡಿನಲ್ಲಿ ಅವನು ಸಿಕ್ಕಿ ಹಾಕಿಕೊಂಡಿದ್ದ ದಿಕ್ಕು ತೋಚದೇ ಅಲೆದಾಡುತ್ತಿರುವವನು ಕಾಡಿನಿಂದ ಹೊರಹೋಗುವ ದಾರಿ ಅವನಿಗೆ ಗೊತ್ತಿಲ್ಲ ಎಷ್ಟು ಸುತ್ತಿದರೂ ಕಾಡಿನಿಂದ ಹೊರ ಹೋಗಲು ಒಂದು ಕುರುಹೂ ದೊರೆಯುತ್ತಿಲ್ಲ

ಅವನು ಎತ್ತಲೋ ನೋಡುತ್ತ ನಿಂತಿದ್ದ ಹಿಂದಿನಿಂದ ಬಂದ ಹುಲಿಯ ಗರ್ಜನೆ ಕೇಳಿದಾಗಲೇ ಅವನಿಗೆ ಎಚ್ಚರ ! ಹಿಂದಿರುಗಿ ನೋಡಿದ ಹುಲಿಯೊಂದು ಇವನನ್ನು ಭಕ್ಷಿಸಲು ಬೆನ್ನಟ್ಟಿ ಬರುತ್ತಿದೆ ಗಾಬರಿಯಾದ ಓಡಿದ ಓಡಿದ ಹುಲಿ ಬೆನ್ನು ಬಿಡುತ್ತಿಲ್ಲ ಅಷ್ಟರಲ್ಲಿ ಓಡುವ ಭರದಲ್ಲಿ ನೋಡದೇ ಎಡವಿ, ಗಿಡ-ಬಳ್ಳಿ ತುಂಬಿದ ಹಾಳು ಬಾವಿಯೊಂದರಲ್ಲಿ ಬಿದ್ದ

ಅವನ ಅದೃಷ್ಟ ತಲೆಕೆಳಗಾಗಿ ಬೀಳುತ್ತಿದ್ದ ಅವನ ಕಾಲು ಬಳ್ಳಿಯೊಂದಕ್ಕೆ ಸಿಕ್ಕಿಕೊಂಡಿತು ಅವನು ಕೆಳಗಿನ ಪ್ರಪಾತಕ್ಕೆ ಬೀಳಲಿಲ್ಲ ತಲೆ ಕೆಳಗೆ , ಕಾಲು ಮೇಲೆ ! ಹಾಳುಬಾವಿಯಲ್ಲಿ ಅವನ ತೂಗಾಟ ಮೇಲಕ್ಕೆ ತಲೆಯೆತ್ತಿ ನೋಡಿದ ಏನೊಂದೂ ಕಾಣದ ಕತ್ತಲೆ ಅರೆಬೆಳಕಿನ ಮಸುಕಿನಲ್ಲಿ ಹೊಂಚು ಹಾಕುತ್ತಿರುವ ಹುಲಿ ಕಂಡಿತು

ಬಾವಿಗೆ ಬಿದ್ದರೂ ಸದ್ಯ ಈ ಹುಲಿಯಿಂದ ತಪ್ಪಿಸಿಕೊಂಡೆನಲ್ಲಾ ಎಂಬ ಹುಸಿ ಸಂತಸ ಅವನಿಗೆ ಕೆಳಕ್ಕೆ ನೋಡಿದ ಭಾರೀ ಪ್ರಪಾತ ಯಾವಾಗ ಕಾಲು ತಪ್ಪಿ ಬೀಳುವನೋ ಗೊತ್ತಿಲ್ಲ ಕೆಳಗೆ ಭಾರೀ ಗಾತ್ರದ ಹೆಡೆತೆರೆದ ಘಟಸರ್ಪ, ಕಾಲಸರ್ಪ ಕಾಯುತ್ತಿದೆ ಮತ್ತೆ ಎದೆಯಲ್ಲಿ ನಡುಕ

ಇಷ್ಟರ ಮಧ್ಯೆ, ಅಲ್ಲಿಯೇ ಕಟ್ಟಿಕೊಂಡ ಜೇನುಗೂಡಿಗೆ ಕಾಲು

ತಗುಲಿತು ರೊಚ್ಚಿಗೆದ್ದ ಜೇನುಹುಳುಗಳು ಇವನ ಸುತ್ತ ಮುತ್ತಿದವು ಅವುಗಳ ಕಡಿತದ ಉರಿ ಬೇರೆ!

ಮೇಲೆ ಹೊಂಚುಹಾಕುತ್ತಿರುವ ಹುಲಿ , ಕೆಳಗೆ ಕಾಯುತ್ತಿರುವ ಕಾಲಸರ್ಪ, ಸುತ್ತ ಕಚ್ಚುವ ಜೇನುನೊಣಗಳು ಈ ಎಲ್ಲ ಸಂಕಷ್ಟಗಳ ನಡುವೆ ಒಡೆದ ಜೇನುಗೂಡಿನಿಂದ ಅವನ ಬಾಯಿಯತ್ತ ಹನಿಯುವ ಜೇನುರಸ !!

ಈತ ಆ ಜೇನು ಹನಿಗೆ ತನ್ನ ನಾಲಿಗೆಯೊಡ್ಡಿ ಸವಿಯುತ್ತಿದ್ದಾನೆ ! ಆ ಅಲ್ಪ ರುಚಿಗೆ ಮೈಮರೆತಿದ್ದಾನೆ !!

ಇದು ಯಾರದೋ ಕಥೆಯಲ್ಲ , ನಮ್ಮ-ನಿಮ್ಮೆಲ್ಲರ ಕಥೆ ! ಸಂಸಾರದಲ್ಲಿ ಬಿದ್ದು ಒದ್ದಾಡುವ ಸಂಸಾರಿ ಜೀವನ ಗೋಳಿನ ವ್ಯಥೆ !!

ಸಂಸಾರವೊಂದು ಕಾಡು ಜೀವ ಒಂಟಿಯಾಗಿ ಗೊತ್ತು ಗುರಿಯಿಲ್ಲದೇ ಇಲ್ಲಿ ಸುತ್ತುತ್ತಿರುವನು ಮುಪ್ಪು ಹುಲಿಯಂತೆ ಬೆನ್ನ ಹಿಂದೆ ಸಾವು ಕಾಲಸರ್ಪವಾಗಿ ಕಾಯುತ್ತಿದೆ !! ಬಂಧುವರ್ಗ ಜೇನುನೊಣಗಳಂತೆ ಮುತ್ತುತ್ತಾರೆ ಸಂಸಾರದ ತಾಪತ್ರಯಗಳ ಉರಿ !! ಏನೊಂದೂ ತಿಳಿಯದ ಅಜ್ಞಾನದ ಕತ್ತಲೆ ! ಇಷ್ಟೆಲ್ಲ ಕ್ಲೇಶಸಂಕುಲದ ನಡುವೆ ಒಂದೊಂದಾಗಿ ಆಗೊಮ್ಮೆ ಈಗೊಮ್ಮೆ ಬೀಳುವ ಜೇನುಹನಿಗಳಂತೆ ಈ ಸಂಸಾರಸುಖ ! ಅದಕ್ಕಾಗಿ ಹಾತೊರೆದು ಕಾಯುವ ಈ ಜೀವನ ಪ್ರವೃತ್ತಿ!

ಇದೊಂದು ಸಂಸಾರದ ಸುಖಕ್ಕೆ ಕನ್ನಡಿ ಹಿಡಿವ ಮಾದರಿಯ ಕತೆ! ಹೀಗಿದೆ ನಮ್ಮ ಸಾಂಸಾರಿಕ ಸುಖ ಇದಕ್ಕಾಗಿ ಇಷ್ಟೊಂದು ಹೋರಾಡಬೇಕೆ? ನಾವು ಯೋಚಿಸಬೇಕು



# ಇಂದ್ರಿಯಗಳ ಮಹತ್ತ್ವ

'ಅಲರ್ಕ'ನಿಗೆ ಇಂದ್ರಿಯಗಳ ಮೇಲೆ ಹತೋಟಿ ಸಾಧಿಸಬೇಕೆಂಬ ಆಸೆ ದುರ್ವಿಷಯಗಳತ್ತ ಹರಿಯುವ ಇಂದ್ರಿಯಗಳ ಮೇಲೆ ಅವನಿಗೆ ಅಸಹನೆ, ಸಿಟ್ಟು ಒಂದು ದಿನ, ತನ್ನೆಲ್ಲ ಕಿವಿ, ಕಣ್ಣು, ನಾಲಿಗೆ, ಮೂಗು, ಇಂದ್ರಿಯಗಳನ್ನು ಕತ್ತಿಯಿಂದ ಕಿತ್ತೆಸೆಯಲು ಹೊರಟನು ಆಗ ಅವನೆದುರು ಇಂದ್ರಿಯಾಭಿಮಾನಿ ದೇವತೆಗಳು ಬಂದಿಳಿದರು

''ಅಲರ್ಕ! ನೀನು ಮಾಡುತ್ತಿರುವುದು ಸರಿಯೆ? ಇನ್ನೊಮ್ಮೆ ವಿಚಾರ ಮಾಡು ಕೆಟ್ಟ ವಿಷಯಗಳೆಡೆಗೆ ಹರಿಯುವ ಇಂದ್ರಿಯಗಳನ್ನೆಲ್ಲ ಕಿತ್ತು ಎಸೆದರೆ, ನೀನೆಣಿಸಿದಂತೆ ಕೆಟ್ಟ ಕಾರ್ಯಗಳು, ನಡೆಯದಿರಬಹುದು, ಪಾಪಸಾಧನ ಆಗದಿರಬಹುದು ಆದರೆ, ಅಷ್ಟರಿಂದ ಮಾತ್ರ ಸತ್ಸಾಧನೆಯಾಯಿತೆಂದು ತಿಳಿಯಬೇಡ ಕೇವಲ ಕೆಟ್ಟ ಕಾರ್ಯಗಳು ನಿಂತರೆ ಮಾತ್ರ ಸಾಲದು, ಸತ್ಕಾರ್ಯಗಳು ನಡೆಯಬೇಕು ಅದಕ್ಕಾಗಿ ಇಂದ್ರಿಯಗಳು, ಈ ದೇಹ ಎಲ್ಲ ಬೇಕೇಬೇಕು ಇಂದ್ರಿಯಗಳು ಈ ದೇಹ ಸಾಧನೆಯ ಮಾರ್ಗದ ಸಾಧನಗಳು ಅವುಗಳನ್ನು ಸರಿಯಾದ ರೀತಿಯಲ್ಲಿ ಬಳಸಲು ಪ್ರಯತ್ನಿಸಬೇಕೇ ಹೊರತು, ಅವುಗಳನ್ನು ಕಿತ್ತೊಗೆಯುವುದರಿಂದ ಯಾವ ಪ್ರಯೋಜನವೂ ಆಗದು ಸಶಕ್ತ ಇಂದ್ರಿಯಗಳನ್ನು ಸರಿಯಾದ ದಾರಿಯಲ್ಲಿ ನಡೆಸಿ ಸಾಧನೆ ಮಾಡಿಕೊಳ್ಳುವುದೇ ಇಂದ್ರಿಯ ನಿಗ್ರಹ, ಇಂದ್ರಿಯಗಳನ್ನು ಕಿತ್ತೆಸೆಯುವುದಿಲ್ಲ!!''

ಇದು ಇಂದ್ರಿಯಾಭಿಮಾನಿ ದೇವತೆಗಳು ಅಲರ್ಕನಿಗೆ ನೀಡಿದ ಸಂದೇಶ ಸಾಧಕರಿಗೆಲ್ಲ ಕೊಟ್ಟ ಎಚ್ಚರ!



# ವೇದ ಪ್ರಮಾಣವಾದರೆ...

ಆಚಾರ್ಯ ಕುಮಾರಿಲಭಟ್ಟರು ದೊಡ್ಡ ಕರ್ಮ ಮೀಮಾಂಸಕರು ಸನಾತನ ವೈದಿಕ ಧರ್ಮಕ್ಕೆ ಆಪತ್ತು ಬಂದೊದಗಿದಾಗ ಅದರ ಉಳಿವಿಗಾಗಿ ಬದುಕನರ್ಪಿಸಿದವರು, ಹೋರಾಡಿದವರು

ಆಗಿನ್ನೂ ಬೌದ್ಧಮತದ ಯುಗ ಎಲ್ಲೆಡೆ ವೇದವಿರೋಧಿ ವಾತಾವರಣ ವೈದಿಕರನ್ನು ಕಂಡರೆ ಶಿಕ್ಷಿಸುವ ರಾಜರುಗಳ ಹಾವಳಿ ಒಮ್ಮೆ ಕುಮಾರಿಲಭಟ್ಟರು ಅಂತಹ ಮತಾಂಧ ಬೌದ್ದರ ಕೈಯ್ಯಲ್ಲಿ ಸಿಕ್ಕಿಬಿದ್ದರು ಬೌದ್ಧಮತದ ದೀಕ್ಷಾಸ್ವೀಕಾರಕ್ಕೆ ಒಪ್ಪದ ಕುಮಾರಿಲಭಟ್ಟರನ್ನು ಬಹುಮಹಡಿ ಕಟ್ಟಡದ ಮೇಲೆ ಕರೆದುಕೊಂಡು ಹೋಗಿ ಕೆಳಕ್ಕೆ ತಳ್ಳಲು ಆದೇಶಿಸಲಾಯಿತು ಕುಮಾರಿಲಭಟ್ಟರ ವೇದನಿಷ್ಠೆ ಬಹಳ ಅಚಲವಾದದ್ದು ಅವರು ತಮ್ಮ ವೇದನಿಷ್ಠೆಯನ್ನು ಪಣಕ್ಕಿಟ್ಟರು

''ಒಂದುವೇಳೆ ವೇದವು ಪ್ರಮಾಣವಾದರೆ, ನನಗೆ ಏನೂ ಆಗದಿರಲಿ''

ಭಟ್ಟರು ಎತ್ತರದಿಂದ ಕೆಳಗೆ ಬಿದ್ದರು ಬದುಕಿದರು!!

ಆದರೆ ಕಣ್ಣೊಂದನ್ನು ಕಳೆದುಕೊಂಡರು

ವೇದಪ್ರಾಮಾಣ್ಯದ ಬಗೆಗೆ ಕುಮಾರಿಲರು ನಾಕಷ್ಟು ನಂಬಿಕೆಯುಳ್ಳವರಾಗಿದ್ದರೂ, ಪರೀಕ್ಷೆಯ ಹಂತದಲ್ಲಿ ಆ ನಂಬಿಕೆಯಲ್ಲಿನ ಸ್ವಲ್ಪ ಶಿಥಿಲತೆ, ಸಂದೇಹ ಅವರನ್ನು ಕುರುಡರನ್ನಾಗಿ ಮಾಡಿತ್ತು ಬದುಕಿದರೂ ''ಒಂದು ವೇಳೆ ಪ್ರಮಾಣವಾದರೆ'' ಎನ್ನುವ ಅವರ ಸಂದೇಹದ ಫಲ ಅವರ ಕಣ್ಣು ಕಳೆದಿತ್ತು ವೇದಗಳ ಬಗೆಗೆ ಕೊಂಚ ಸಂದೇಹಿಸಿದ ಅವರ ಪಾಡೇ ಹೀಗಾದರೆ, ಇನ್ನು ನಮ್ಮಂತಹವರ ಪಾಡೇನು?!!



# ನಮಸ್ಕಾರ ಯಾರಿಗೆ ?

ಅವನೊಬ್ಬ ಶ್ರೀಮಂತ ಅವನು ದಾರಿಯಲ್ಲಿ ಹೊರಟರೆ ಎಲ್ಲರೂ ಅವನಿಗೆ ನಮಸ್ಕಾರ ಸಲ್ಲಿಸುವವರೇ! ಪ್ರತಿಯೊಬ್ಬರು ನಮಸ್ಕಾರ ಮಾಡಿದಾಗಲೂ ಆ ಶ್ರೀಮಂತ ''ತಲುಪಿಸುತ್ತೇನೆ'' ಎನ್ನುತ್ತಿದ್ದ

ಎಲ್ಲರಿಗೂ ಕುತೂಹಲ ಇವನು ನಮಸ್ಕಾರವನ್ನು ಯಾರಿಗೆ ತಾನೆ ತಲುಪಿಸುತ್ತಾನೆ?

ಒಂದು ದಿನ ಆ ಧನಿಕನ ಒಬ್ಬ ಗೆಳೆಯ ಈ ಬಗೆಗೆ ಕೇಳಿಯೇ ಬಿಟ್ಟ

''ಜನರೆಲ್ಲ ನಿನಗೆ ನಮಿಸಿದಾಗ, ನೀನು ಆ 'ನಮಸ್ಕಾರವನ್ನು ತಲುಪಿಸುವೆನು' ಎನ್ನುತ್ತಿಯಲ್ಲ ಆ ನಮಸ್ಕಾರವನ್ನು ಯಾರಿಗೆ ನೀನು ತಲುಪಿಸುತ್ತೀ?''

ಶ್ರೀಮಂತ ನಕ್ಕ ಪ್ರಶ್ನೆ ಕೇಳಿದ ಆ ಗೆಳೆಯನನ್ನು ತನ್ನ ಮನೆಯೊಳಗೆ ಕರೆದೊಯ್ದು ತನ್ನ ಕೊಠಡಿಯೊಳಗೆ ಖಜಾನೆಯ ಬಾಗಿಲು ತೆರೆದು ತೋರಿಸಿದ ಆ ಕವಾಟದ ತುಂಬೆಲ್ಲ ಹಣ-ಒಡವೆ ತುಂಬಿತ್ತು

ಅದರೆಡೆಗೆ ಬೆರಳು ಮಾಡಿ ಆ ಶ್ರೀಮಂತ ಹೇಳುತ್ತಾನೆ

''ನಾನು ಎಲ್ಲ ಜನ ನಮಸ್ಕಾರ ತಲುಪಿಸುವದು ಇಲ್ಲಿಗೇ! ಪ್ರತಿನಿತ್ಯ ರಾತ್ರಿ ಇಲ್ಲಿಗೆ ಬಂದು ನಾನು ಆ ನಮಸ್ಕಾರಗಳನ್ನು ಅರ್ಪಿಸುತ್ತೇನೆ ಹಾಗೆ ಮಾಡುವುದಕ್ಕೆ ಕಾರಣವಿದೆ ಹಿಂದೆ ನಾನು ಬಡವನಾಗಿದ್ದಾಗ ನನಗೆ ಯಾರೂ ನಮಸ್ಕರಿಸುತ್ತಿರಲಿಲ್ಲ ಈಗ ನನಗೆ ಸಂಪತ್ತು ಬಂದಿದೆ ಎಲ್ಲರೂ ನಮಸ್ಕರಿಸುತ್ತಾರೆ ಏಕೆ? ಸಂಪತ್ತಿನಿಂದಾಗಿ ಹೀಗಾಗಿ ಜನರೆಲ್ಲ ನಮಸ್ಕರಿಸುವದು, ಗೌರವಿಸುವುದು ನನ್ನ ಸಂಪತ್ತಿಗೇ ಹೊರತು ನನಗಲ್ಲ ಅದಕ್ಕೆಂದೇ ನಾನು ಈ ತಲುಪಿಸುವ ಮಾತನಾಡುವದು ''

ಅಧಿಕಾರಿಗಳಿಗೆ, ಮಂತ್ರಿಗಳಿಗೆ, ಪೀಠಾಧಿಪತಿಗಳಿಗೆ ಈ ಧನಿಕ ಮಾದರಿಯಾಗಬೇಕು ಅವರಿಗೆ ಪದನಿಮಿತ್ತ ದೊರಕುವ ನಮಸ್ಕಾರ,

ಆದರ ಸಂಮಾನಗಳೆಲ್ಲ ಆ ಪದಕ್ಕೆ ಸ್ಥಾನಕ್ಕೆ ಸಲ್ಲಬೇಕಾದುದೇ ಹೊರತು ಸ್ವಂತ ಅವರಿಗಲ್ಲ!!

ಸಮಾಜದಲ್ಲಿ ಮನೆಯಲ್ಲಿ ಬೇರೆಯವರಿಂದ ನಾವು ಪಡೆಯುವ ಗೌರವ-ಆದರ-ಪ್ರಣಾಮಗಳನ್ನು ನಾವು ನಮ್ಮೊಳಗೆ ನೆಲೆಸಿರುವ ಭಗವಂತನಿಗೆ ಎಂದು ತಿಳಿದು ಅವನಿಗೇ ಅರ್ಪಿಸಬೇಕೇ ಹೊರತು, ಆ ನಮಸ್ಕಾರ-ಗೌರವಾದರಗಳು ನಮಗೇ ಎಂದು ಭಾವಿಸಬಾರದು.

''ಗುಹಾಶಯಾಯೇವ ನ ದೇಹಮಾನಿನೇ...''



ಆಕಾಶಾತ್ ಪತಿತಂ ತೋಯಂ
ಯಥಾ ಗಚ್ಛತಿ ಸಾಗರಮ್ ।
ಸರ್ವದೇವನಮಸ್ಕಾರಃ
ಕೇಶವಂ ಪ್ರತಿ ಗಚ್ಛತಿ ॥

ಆಗಸದಿಂದ ಬೀಳುವ ನೀರಹನಿ
ಸಾಗರವ ಸೇರುವಂತೆ,
ಬೇರೆಲ್ಲ ದೇವತೆಗಳಿಗೆ ಮಾಡುವ
ನಮನ ಕೇಶವನಿಗೆ ಸಲ್ಲುತ್ತದೆ.



# ಮುಂದೆ ಸಾಗದ ದೋಣಿ

ನದಿಯ ಪಾತ್ರ ತುಂಬಾ ವಿಶಾಲ ಒಂದು ದಡದಿಂದ ಮತ್ತೊಂದು ದಡ ತಲುಪಬೇಕಾಗಿದೆ

ರಾತ್ರಿಯ ಹೊತ್ತು ತುಂಬ ಕತ್ತಲೆ ದೋಣಿಯೊಂದರಲ್ಲಿ ಅವನು ಕುಳಿತ ಅವನಿಗೆ ಹುಟ್ಟು ಹಾಕಿ ಅಭ್ಯಾಸವಿದೆ ಹುಟ್ಟು ಹಾಕತೊಡಗಿದ ತುಂಬ ಹೊತ್ತು ಕಳೆಯಿತು ಆಚೆಯ ದಡ ಬರುತ್ತಲೇ ಇಲ್ಲ ! ಹುಟ್ಟು ಹಾಕುತ್ತಲೇ ಇದ್ದ ರಾತ್ರಿಯಿಡೀ ಕಳೆಯಿತು ಬೆಳಕಾಯಿತು ಅವನ ದೋಣಿ ಅದೇ ದಡದಲ್ಲೇ ಇದೆ ! ರಾತ್ರಿಯಿಡೀ ಹುಟ್ಟು ಹಾಕಿದರೂ ದೋಣಿ ಸ್ವಲ್ಪವೂ ಮುಂದೆ ಸರಿದಿಲ್ಲ!

ಅವನಿಗೆ ದಿಗ್ಭ್ರಮೆಯಾಯಿತು ! ಏಕೆ ? ಯೋಚಿಸಿದ

ಅದನ್ನೇ ಚಿಂತಿಸುತ್ತ ಹಿಂದಿರುಗಿ ನೋಡಿದರೆ, ಎಲ್ಲ ಅರ್ಥವಾಯಿತು ರಾತ್ರಿಯಿಡೀ ಮಾಡಿದ ಕಾಯಕ ವ್ಯರ್ಥವಾದುದು ಏಕೆಂದು ಅವನಿಗರ್ಥವಾಯಿತು ದಡದ ಗೂಟಕ್ಕೆ ಕಟ್ಟಿದ್ದ ದೋಣಿಯ ಗಂಟನ್ನು ಬಿಚ್ಚದೇ ಅವನು ರಾತ್ರಿಯ ಕತ್ತಲಲ್ಲಿ ಹುಟ್ಟು ಹಾಕಿದ್ದ!

ನಮ್ಮದೂ ಇದೇ ಕತೆ !

ಸಂಸಾರದ ಜೊತೆಗೆ ನಮಗಿರುವ ಅಭಿಮಾನ ಮಮಕಾರಗಳ ಗಂಟನ್ನು ಬಿಚ್ಚದೇ ನಾವು ನಡೆಸುವ ಧಾರ್ಮಿಕ ಆಧ್ಯಾತ್ಮಿಕ ಕಾಯಕ , ಸಾಧನೆಯೆಲ್ಲ ಕಟ್ಟಿದ ದೋಣಿಗೆ ಹುಟ್ಟು ಹಾಕಿದ ಶ್ರಮ ! ಸಂಸಾರಕ್ಕೆ ಕಟ್ಟಿಕೊಂಡ ನಾವು ಅದೆಷ್ಟು ಸಾಧನೆ ಮಾಡಿದರೂ, ನಮ್ಮದು ಮುಂದೆ ಚಲಿಸದ ದೋಣಿಯಲ್ಲಿನ ಪಯಣವಾಗಿದೆ !!



# ದೇವರಿಗೆ ತಲುಪಿದ್ದು ಎರಡು ಮಾತ್ರ!

ಜಮೀನುದಾರರ ತೋಟದಲ್ಲಿ ಬಾಳೆಯ ಫಸಲು ಬಂದಿತು ಪ್ರತಿವರ್ಷ ಫಸಲು ಬಂದಾಗ ಮೊದಲು ಊರ ದೇವರಿಗೆ ನೈವೇದ್ಯ ಮಾಡಿಸುವುದು ಜಮೀನುದಾರರ ವಾಡಿಕೆ ಈ ಬಾರಿಯೂ ದೇವಸ್ಥಾನಕ್ಕೆ ದೇವರ ಸಮರ್ಪಣೆಗಾಗಿ ಒಂದು ಬಾಳೆಯ ಗೊನೆ ತೆಗೆದಿರಿಸಿದರು ತೋಟದಲ್ಲಿ ಕೆಲಸ ಮಾಡುವ ಪುಟ್ಟ ಬಾಲಕನ ಕೈಯಲ್ಲಿ ಆ ಗೊನೆ ನೀಡಿ, ದೇವಸ್ಥಾನದ ಅರ್ಚಕರಿಗೆ ಕೊಡಲು ಹೇಳಿ ಕಳಿಸಿದರು

ಆ ಹುಡುಗ ಬಾಳೆಯ ಗೊನೆ ಹೊತ್ತು ದೇವಸ್ಥಾನದತ್ತ ಹೊರಟ ಮಧ್ಯಾಹ್ನದ ಹೊತ್ತು, ಭಾರೀ ಬಿಸಿಲು, ಹುಡುಗನಿಗೆ ಹಸಿವು ದೇವರಿಗಾಗಿ ಹೊರಟ ಆ ಗೊನೆಯ ಬಾಳೆಹಣ್ಣುಗಳು ಚೆನ್ನಾಗಿ ಹಣ್ಣಾಗಿದ್ದವು ಸುವಾಸನೆ ಹುಡುಗನ ಮೂಗಿಗೆ ಬಡಿಯುತ್ತಿತ್ತು ಮೊದಲೇ ಹಸಿವಿನಿಂದ ಕಂಗಾಲಾದ ಹುಡುಗನಿಗೆ ಸ್ವಲ್ಪವೂ ತಡೆಯಲಾಗಲಿಲ್ಲ ಗೊನೆ ಕೆಳಗಿಳಿಸಿದ ನಡುವಿನ ಎರಡು ಹಣ್ಣು ಕಿತ್ತ ಹಿಂದೆಮುಂದೆ ನೋಡದೇ ತಿಂದೇ ಬಿಟ್ಟ ಅವನ ಹಸಿವು ಹಿಂಗಿತು

ಮತ್ತೆ ಗೊನೆ ಹೊತ್ತು ದೇವಸ್ಥಾನದ ಬಳಿಗೆ ಬಂದು ಅರ್ಚಕರಿಗೆ ನೀಡಿದ ಅರ್ಚಕರು ದೇವರ ಸಮರ್ಪಣೆಗೆ ಜಮೀನ್ದಾರರು ಕಳಿಸಿದ ಬಾಳೆಯ ಗೊನೆ ನೋಡಿದರು ನಡುವಿನ ಎರಡು ಹಣ್ಣು ಕಿತ್ತಿರುವುದು ಅವರ ಕಣ್ಣಿಗೆ ಬಿತ್ತು ಹುಡುಗನನ್ನು ಗದರಿ ಕೇಳಿದರು ಆ ಹುಡುಗ ತಾನೇ ಕಿತ್ತು ತಿಂದಿರುವುದಾಗಿ ಒಪ್ಪಿಕೊಂಡ ಅರ್ಚಕರು ಅವನನ್ನು ಚೆನ್ನಾಗಿ ಬೈದರು ದೇವರ ಸಮರ್ಪಣೆಗೆ ತಂದುದನ್ನು ಕದ್ದು ತಿಂದದ್ದು ಮಹಾಪರಾಧ ಅಷ್ಟೂ ತಿಳಿಯಲಾರದೇ? ಎಂದೆಲ್ಲ ಆ ಬಾಲಕನಿಗೆ ಬೆವರಿಳಿಸಿ ಕಳುಹಿಸಿದರು

ಆ ದಿನದ ಪೂಜೆಯಲ್ಲಿ ಉಳಿದ ಬಾಳೆಯ ಗೊನೆಯನ್ನು ದೇವರಿಗೆ ನೈವೇದ್ಯ ಅರ್ಪಿಸಿದರು

ಆ ದಿನ ರಾತ್ರಿ ಜಮೀನುದಾರರ ಕನಸಿನಲ್ಲಿ ದೇವರು ಕಾಣಿಸಿಕೊಂಡರು. ಕಳುಹಿಸಿದ ಬಾಳೆಯ ಗೊನೆಯಲ್ಲಿ ಎರಡು ಬಾಳೆಹಣ್ಣುಗಳು ಮಾತ್ರ ತನಗೆ ತಲುಪಿರುವುದಾಗಿ ದೇವರು ಹೇಳಿ ಮಾಯವಾದಾಗ ಜಮೀನ್ದಾರರಿಗೆ ಬಹಳ ಅಚ್ಚರಿ!

ಮರುದಿನ ಅರ್ಚಕರನ್ನು ಕರೆದು ವಿಚಾರಿಸಿದರು. ನಡೆದ ಘಟನೆಯನೆಲ್ಲ ಕೇಳಿದಾಗಲೇ ತಿಳಿದದ್ದು - ಆ ಹಸಿದ ಪುಟ್ಟ ಬಾಲಕ ತಿಂದ ಎರಡು ಹಣ್ಣುಗಳು ಮಾತ್ರ ದೇವರಿಗೆ ನೇರ ತಲುಪಿದ್ದವು!!

ಹಸಿದವರ ಹೊಟ್ಟೆಯಲ್ಲಿ ದೇವರಿರುವನಲ್ಲವೆ!

ಆದುದರಿಂದ, ನಮ್ಮ ದಾನ ಅವಶ್ಯಕತೆ ಇರುವವರಿಗಾಗಿ ಮೀಸಲಿರಬೇಕು.



**ದಾನಂ ಧ್ರುವಂ ಫಲತಿ ಪಾತ್ರಗುಣಾನುಕೂಲ್ಯಾತ್ ॥**

ದಾನ ಪಡೆವ ವ್ಯಕ್ತಿಯ ಯೋಗ್ಯತೆಗನುಗುಣವಾಗಿ, ನಾವು ನೀಡಿದ ದಾನವು ಹುಸಿಯಾಗದೆ ಫಲಿಸುತ್ತದೆ.



# 'ನಾ' ಹೋದರೆ, ಹೋದೇನು...

''ನಿಮ್ಮಲ್ಲಿ ಮುಕ್ತಿಗೆ ಯಾರು ಹೋಗಬಲ್ಲಿರಿ?''

ಗುರುಗಳು ಶಿಷ್ಯರನ್ನು ಕೇಳಿದರು.

ಉತ್ತರ ಬರಲಿಲ್ಲ. ಶಿಷ್ಯವರ್ಗದಲ್ಲಿ ಗುಸುಗುಸು. ತಾ ಹೋಗಬಲ್ಲೆನೆಂದು ಹೇಳಲು ಯಾರಿಗೂ ಧೈರ್ಯವಿಲ್ಲ. ಗುರುಗಳು ಸುಮ್ಮನಿದ್ದರು. ಯಾರಿಂದಲೂ ಉತ್ತರ ಬರಲಿಲ್ಲ. ಕೊನೆಗೆ ಗುರುಗಳು ದೂರದ ಮೂಲೆಯಲ್ಲಿ ಕುಳಿತ ಕನಕನನ್ನು ಕೇಳಿದರು.

ಕನಕ ಉತ್ತರಿಸಿದ.

''ಗುರುಗಳೇ, ನಾ ಹೋದರೆ, ಹೋದೇನು...''

ಶಿಷ್ಯರೆಲ್ಲ ನಗತೊಡಗಿದರು. ಹಾಸ್ಯ ಮಾಡಿದರು. ವ್ಯಂಗ್ಯವಾಡಿದರು.

''ಸರಿಯಾದ ಉತ್ತರ !'' ಗುರುಗಳು ಹೀಗೆಂದಾಗ ಎಲ್ಲರಿಗೂ ಅಚ್ಚರಿಯೋ ಅಚ್ಚರಿ !

ಕನಕನ ಸೂತ್ರಪ್ರಾಯದ ಮಾತು ಗುರುಗಳಿಗೆ ಅರ್ಥವಾಗಿತ್ತು.

''ನಾನು'', ''ನನ್ನದು'' ಎಂಬ ಅಹಂಕಾರ-ಮಮಕಾರವಳಿದರೆ, ಮುಕ್ತಿ ಕಟ್ಟಿಟ್ಟ ಬುತ್ತಿ!! ಇದು ಕನಕ ಹೇಳಿದ ಮಾತು''

ಶಿಷ್ಯ ಕನಕನ ಸೂತ್ರಕ್ಕೆ ಗುರುಗಳ ಭಾಷ್ಯ !



# ಮುಗಿಯದ ಮೊದಲ ಪಾಠ

ಪಾಂಡವ-ಕೌರವ ರಾಜಕುಮಾರರಿಗೆಲ್ಲ ಒಟ್ಟಿಗೇ ಪಾಠ ನಡೆಯುತ್ತಿತ್ತು ದ್ರೋಣರು ಪ್ರಧಾನ ಅಧ್ಯಾಪಕರು ಯುದ್ಧ-ವಿದ್ಯೆಯಲ್ಲದೇ ನೀತಿಬೋಧಕ ಪಾಠಗಳೂ ಇರುತ್ತಿದ್ದವಂತೆ!

ಆ ದಿನ ಪುಸ್ತಕದ ಮೊದಲ ಪಾಠವನ್ನು ಹೇಳಿ ಮುಗಿಸಿದ ಗುರುಗಳು ಮುಂದಿನ ಪಾಠಕ್ಕೆ ಹೊರಟರು ಅದಕ್ಕಿಂತ ಮೊದಲು, ಮೊದಲ ಪಾಠವನ್ನು ಕಲಿತು ಅಭ್ಯಾಸ ಮಾಡಿರುವಿರಾ? ಎಂದು ಮಕ್ಕಳನ್ನು ಕೇಳಿದರಂತೆ! ಎಲ್ಲ ಮಕ್ಕಳೂ ಕೈಯೆತ್ತಿ ಮೊದಲ ಪಾಠಪೂರ್ಣವಾಗಿ ಅಭ್ಯಾಸ ಮಾಡಿಯಾಗಿದೆ ಎಂದರಂತೆ!

ಒಬ್ಬ ಶಿಷ್ಯ ಮಾತ್ರ ಎದ್ದುನಿಂತ ! ಅವನು ಧರ್ಮ ಹಿರಿಯ ಪಾಂಡವ ಮೊದಲ ಪಾಠ ಅಭ್ಯಾಸ ಮಾಡಲ ತನಗೆ ಸಮಯಬೇಕೆಂದೂ, ಇನ್ನೂ ಕರಗತವಾಗಿಲ್ಲವೆಂದೂ ಹೇಳಿದ

ಗುರುಗಳು ಗದರಿದರು

''ಮೊದಲ ಪಾಠ ತುಂಬಾ ಚಿಕ್ಕದು ಇದನ್ನು ಅಭ್ಯಾಸ ಮಾಡಲು ಇಷ್ಟು ಸಮಯ ತೆಗೆದುಕೊಂಡರೆ, ಮುಂದೆ ಹೇಗೆ ? '' ಎಂದರು

ಧರ್ಮ ಪಟ್ಟು ಹಿಡಿದ ಹೇಳಿಕೊಟ್ಟ ಪಾಠ ಪೂರ್ಣ ಅಭ್ಯಾಸ ಆಗುವವರೆ ಮುಂದೆ ಹೋಗಲಾರೆನೆಂದ ಆ ಮೊದಲ ಪಾಠವನ್ನೇ ಧರ್ಮ ತನ್ನ ಜೀವಿತವಿಡೀ ತಪ್ಪದೇ ಅಭ್ಯಸಿಸಿದ ಪಾಲಿಸಿದ

ಆ ಮೊದಲ ಪಾಠ - ಸತ್ಯದ ಪಾಠ

''ಸತ್ಯಂ ವದ'' ಎನ್ನುವ ವೇದದ ಮೊದಲ ಪಾಠ!!



# ಹೊತ್ತು ಮುಳುಗಿದ ಮೇಲೆ...

ಹಸಿವಿನಿಂದ ಬಳಲುತ್ತಿದ್ದ ಆ ಹಕ್ಕಿಗೆ ಬೆಳಗಿನಿಂದ ಆಹಾರ ದೊರಕಿರಲಿಲ್ಲ. ಸುತ್ತಾಡಿ ಸುಸ್ತಾದ ಹಕ್ಕಿ ಸಮುದ್ರದ ದಂಡೆಗೆ ಬಂದಿತು. ಸಮುದ್ರದ ತರೆಗಳಾಚೆ ಹೆಣವೊಂದು ತೇಲುತ್ತಿರುವುದು ಹಕ್ಕಿಗೆ ಕಾಣಿಸಿತು. ಹಕ್ಕಿಯ ಸಂತಸಕ್ಕೆ ಪಾರವೇ ಇಲ್ಲ. ಮರುಕ್ಷಣದಲ್ಲಿ ಹಕ್ಕಿ ಆ ಹೆಣದ ಮೇಲೆ! ಹೆಣವನ್ನು ಕುಕ್ಕಿ ಮಾಂಸ ತಿನ್ನತೊಡಗಿತು. ಹಸಿದ ಹಕ್ಕಿಗೆ ಉಸಿರು ಬಂತು. ಸ್ವಲ್ಪ ಹೊತ್ತಾಯಿತು. ಹಕ್ಕಿಗೆ ಮಾಂಸದ ರುಚಿ ಹಿಡಿಯಿತು. ಎಷ್ಟು ತಿಂದರೂ ತೃಪ್ತಿಯಿಲ್ಲ. ಹೊಟ್ಟೆ ತುಂಬಿ ತೇಗಿದರೂ, ಮತ್ತಷ್ಟು ತಿನ್ನಲಾಸೆ. ಹಕ್ಕಿ ಆ ಮಾಂಸದ ರುಚಿಗೆ ಮೈಮರೆಯಿತು. ತಿನ್ನುವುದರಲ್ಲಿ ಮಗ್ನವಾದ ಹಕ್ಕಿಗೆ ಸಮಯ ಕಳೆದು ಸಂಜೆಯಾದದ್ದೇ ತಿಳಿಯಲಿಲ್ಲ. ಕೊನೆಗೊಮ್ಮೆ ಅದಕ್ಕೆ ಬಾಯಿ ಕಟ್ಟಿತು. ಗೂಡಿಗೆ ಹಿಂದಿರುಗುವ ತವಕ. ಕತ್ತೆತ್ತಿ ಸುತ್ತಲೂ ನೋಡಿತು. ಎಲ್ಲಿಯೂ ಸಮುದ್ರದ ದಡವೇ ಕಾಣುತ್ತಿಲ್ಲ. ಎಲ್ಲಿ ನೋಡಿದರಲ್ಲಿ ಸಾಗರದ ತೆರೆಗಳು. ಹಕ್ಕಿಗೆ ದಿಕ್ಕೇ ತೋಚಲಿಲ್ಲ. ಹಕ್ಕಿ ಕುಳಿತ ಆ ಹೆಣ ತೇಲುತ್ತ ತೇಲುತ್ತ ಸಾಗರದ ಮಧ್ಯಕ್ಕೆ ಬಂದಿತ್ತು. ಹಕ್ಕಿ ಹೌಹಾರಿತ್ತು. ಅಲ್ಲಿಯೇ ಇರುವಂತಿಲ್ಲ, ದಡದೆಡೆಗೆ ಹಾರುವಂತಿಲ್ಲ! ತ್ರಿಶಂಕುಸ್ಥಿತಿ ಹಕ್ಕಿಯದಾಗಿತ್ತು.

ಭೋಗಜೀವನದಲ್ಲೇ ಮುಳುಗಿರುವ ನಮ್ಮ ಪಾಡೂ ಇದೇ! ಇಂದ್ರಿಯಗಳೆಲ್ಲ ಚುರುಕಾಗಿರುವಷ್ಟು ಕಾಲ, ಭೋಗ-ವೈಭೋಗಗಳಲ್ಲಿ ಮೈಮರೆತು, ಇಂದ್ರಿಯಗಳು ಶಕ್ತಿ ಕಳೆದುಕೊಂಡು ಸಾಕೆನಿಸಿದಾಗ ಪಾರತ್ರಿಕದ ಬಗ್ಗೆ ಎಚ್ಚರಗೊಳ್ಳುವೆವು. ಆದರೆ, ಮತ್ತೆ ಹಿಂದಿರುಗಲಾರದಷ್ಟು ದೂರ ಸಾಗಿ, ನಾವು ವಂಚಿತರಾಗುವೆವು.

ಆದುದರಿಂದ ಆ ಹಕ್ಕಿಯಂತೆ ಸಂಸಾರದ ರುಚಿಯಲ್ಲಿ ಮೈಮರೆಯದೇ, ನಾವು ಎಚ್ಚೆತ್ತುಕೊಳ್ಳಬೇಕು. ನಾವು ಎಲ್ಲಿದ್ದರೂ ಸೇರಬೇಕಾದ ಗಮ್ಯದತ್ತ ಸದಾ ಲಕ್ಷ್ಯವಿರಬೇಕು.

# ಬರಿಗೈಯಲಿ ಹಿಂದಿರುಗಿದಾಗ...

ತಂದೆಗೆ ಮಗನ ಮೇಲೆ ತುಂಬ ನಂಬಿಕೆ ತನ್ನ ಮಾತನೆಲ್ಲ ನಡೆಸುವವನೆಂಬ ವಿಶ್ವಾಸ ಒಮ್ಮೆ ದೂರದ ನಗರದಲ್ಲಿ ಕೋರ್ಟಿನ ಕೆಲಸದ ಅನಿವಾರ್ಯತೆಯೊಂದು ಬಂದೊದಗಿತು ಆ ಕೆಲಸ ಪೂರೈಸಿ ಬರಲು ಮಗನಿಗೆ ಅಪ್ಪ ಹೇಳಿದ ಕೋರ್ಟು-ಕಚೇರಿಯ ಕೆಲಸ, ಅಪ್ಪ ಮಗನಿಗೆ ನಾಕಷ್ಟು ಹಣ ನೀಡಿದ

ಸರಿ! ಅಪ್ಪ ಹೇಳಿದ ಕೆಲಸಕ್ಕಾಗಿ ಮಗ ನಗರಕ್ಕೆ ಬಂದಿಳಿದ

ನಗರದ ಬಣ್ಣ-ಬಣ್ಣದ ಬೀದಿಗಳು, ಅಲ್ಲಿನ ಚಿತ್ರಮಂದಿರಗಳು, ವಿಧವಿಧದ ಉಪಹಾರ ಮಂದಿರಗಳು, ಮಾರಾಟ ಮಳಿಗೆಗಳು-ಇದೆಲ್ಲ ಕಂಡು ಆ ಮಗನಿಗೆ ಹುಚ್ಚೇ ಹಿಡಿಯಿತು ಪಟ್ಟಣವನ್ನೆಲ್ಲ ತಿರುಗಾಡಿದ ಆನಂದದಲ್ಲಿ ಮೈಮರೆತ ಬೇಕೆನಿಸಿದ ವಸ್ತುಗಳನ್ನೆಲ್ಲ ಕಂಡು ಕೊಂಡ ಪುಳಕಗೊಂಡ

ಅಪ್ಪ ನೀಡಿದ ಹಣವೆಲ್ಲ ಖಾಲಿಯಾಯಿತು ಕೈ ಬರಿದಾಯಿತು ಅವನಿಗೆ ತನ್ನೂರ ನೆನಪಾಯಿತು ಊರಿಗೆ ಹಿಂದಿರುಗಿದ

ಬರಿಗೈಯಲ್ಲಿ ಮನೆಗೆ ಬಂದ ಮಗನನ್ನು ಅಪ್ಪ ಕೇಳಿದ

''ಕೆಲಸವಾಯಿತೋ?''

ಮಗ ತಲೆ ಕೆರೆದುಕೊಂಡ

''ನಾನು ಹೇಳಿ ಕಳುಹಿಸಿದ ಕೆಲಸ ಪೂರೈಸಿಕೊಂಡು ಬಂದೆಯಾ?''

ಅಪ್ಪ ಜೋರಾಗಿ ಕೇಳಿದ

ಈ ಬೆಪ್ಪನಿಗೆ ಈಗ ಅಪ್ಪ ಹೇಳಿದ ಕೆಲಸದ ನೆನಪಾಯಿತು ಅಪ್ಪನ ಕೆಲಸಕ್ಕಾಗಿ ನಗರಕ್ಕೆ ಹೋದ ವ್ಯಕ್ತಿ ಆ ಕೆಲಸವೊಂದನ್ನು ಬಿಟ್ಟು ಬೇರೆಲ್ಲ ಮಾಡಿ ಬಂದಿದ್ದ! ಅಪ್ಪ ಹೇಳಿದ ಕೆಲಸವನ್ನೇ ಮರೆತಿದ್ದ!!

ಅಪ್ಪ ಮಗನ ತಿಳಿಗೇಡಿತನಕ್ಕೆ ಹಣೆ ಹಣೆ ಚಚ್ಚಿಕೊಂಡ

ಭಗವಂತನೂ ನಮ್ಮನ್ನು ಜ್ಞಾನಸಾಧನೆಗಾಗಿ ಮಾನವಜನ್ಮ ನೀಡಿ ಇಲ್ಲಿಗೆ ಕಳಿಸಿದ್ದಾನೆ. ನಾವು ಭಗವಂತ ಹೇಳಿದ ಆ ಕಾರ್ಯವನ್ನೂ ಬಿಟ್ಟು, ಐಷಾರಾಮದ ಜೀವನ ನಡೆಸಿ ಅವನ ಬಳಿಗೆ ಬರಿಗೈಯಲ್ಲಿ ಹಿಂದಿರುಗುತ್ತೇವೆ. ಮಾನವ ಜನ್ಮ ಹೊತ್ತು ಇಲ್ಲಿಗೆ ಬಂದಾಗ ಅವನ ಸಂದೇಶವನ್ನು ಮರೆಯುತ್ತೇವೆ. ಭೋಗದಲ್ಲಿ ಮೈಮರೆತು, ಜೀವನ ಸಾರ್ಥಕವೆಂದು ಭಾವಿಸುತ್ತೇವೆ. ಮತ್ತೆ ಸ್ಮರಣೆಯಾದಾಗ ಅವಕಾಶ ಕಳೆದುಹೋಗಿರುತ್ತದೆ ; ಕಾಲ ಮಿಂಚಿ ಹೋಗಿರುತ್ತದೆ !

ನಮ್ಮ ಅವಿವೇಕದ ಈ ವರ್ತನೆಗೆ ಆ ಭಗವಂತನೂ ತಲೆ ಚಚ್ಚಿಕೊಂಡಾನು !!



# ವೇದಿಕೆಯ ನೇರಿದಾಗ...

ಕೆಲ ಜನ ಯಾತ್ರಿಕರು ಉತ್ತರದ ಯಾತ್ರೆಗೆ ಹೊರಟಿದ್ದರು ಮಧ್ಯಾಹ್ನದ ಬಿಸಿಲ ಬೇಗೆ ಬಾಯಾರಿಕೆ - ಹಸಿವು ಎರಡೂ ಆಗಿತ್ತು

ದಾರಿಯ ಪಕ್ಕದಲ್ಲಿದ್ದ ಮಣ್ಣಿನ ದಿಬ್ಬದ ಮೇಲೆ ನಿಂತ ಆ ವ್ಯಕ್ತಿ ಯಾತ್ರಿಕರತ್ತ ಕೈಬೀಸಿ ಕರೆದ

''ಓ ಯಾತ್ರಿಕರೆ, ಬನ್ನಿ, ಇದೋ ಇದು ನಮ್ಮ ತೋಟ ನೀವು ನಮ್ಮ ಅತಿಥಿಗಳು ಈ ತೋಟ ನಿಮ್ಮದೇ, ಬನ್ನಿ ವಿಶ್ರಮಿಸಿಕೊಳ್ಳಿ ಹಣ್ಣು ತಿನ್ನಿ ಬಾಯಾರಿಕೆ ನೀಗಿಸಿಕೊಳ್ಳಿ ''

ಅವನ ಸ್ವಾಗತಕ್ಕೆ ಸಂತಸಗೊಂಡ ಯಾತ್ರಿಕರ ತಂಡ ತೋಟದತ್ತ ಹೊರಟಿತು ಇನ್ನೇನು ತೋಟದೊಳಗೆ ಕಾಲಿಡಬೇಕು, ಅಷ್ಟರಲ್ಲಿ ಅದೇ ವ್ಯಕ್ತಿಯೇ ಗಟ್ಟಿಯಾಗಿ ಗದರತೊಡಗಿದ

''ಯಾರು ನೀವು? ನಿಮಗೆಷ್ಟು ಧೈರ್ಯ? ಬೇರೆಯವರ ತೋಟಕ್ಕೆ ನುಗ್ಗಲು ನಿಮಗೆ ನಾಚಿಕೆಯಾಗದೇ? ಹೋಗಿ ದೂರ ಹೋಗಿ ''

ಯಾತ್ರಿಕರು ಹೆದರಿ ದೂರಸರಿದರು ಮತ್ತೆ ದಾರಿಯಲ್ಲಿ ಸಾಗಲು ಹೊರಡುವಷ್ಟರಲ್ಲಿ ಅದೇ ವ್ಯಕ್ತಿಯೇ ಮತ್ತೆ ಅದೇ ಮಣ್ಣಿನ ದಿಬ್ಬದ ಮೇಲೆ ನಿಂತು ಮತ್ತೆ ಸ್ವಾಗತಭಾಷಣ ಪ್ರಾರಂಭಿಸಿದ

''ಬನ್ನಿ ನಿಮಗೆ ಏಕೆ ಅಷ್ಟು ಸಂಕೋಚ? ಇದೆಲ್ಲ ನಿಮ್ಮದೇ ಸಂಕೋಚವಿಲ್ಲದೇ ಬನ್ನಿ ''

ಈ ಬಾರಿ ಯಾತ್ರಿಕರು ಆ ತೋಟಕ್ಕೆ ಹೋಗಲು ಅನುಮಾನಿಸಿದರು ಆ ವ್ಯಕ್ತಿ ತುಂಬ ಒತ್ತಾಯಿಸಿದ ಕರೆದ ಇತ್ತ ಯಾತ್ರಿಕರಿಗೂ ಹಸಿವು, ನೀರಡಿಕೆ, ಸರಿ, ಕೊನೆಗೆ ಯಾತ್ರಿಕರೆಲ್ಲ ಮತ್ತೆ ತೋಟದತ್ತ ಹೊರಟರು ಆ ವ್ಯಕ್ತಿ ದಿಬ್ಬ ಇಳಿದು ತೋಟದತ್ತ ಬಂದ ಯಾತ್ರಿಕರ ಗುಂಪು ತೋಟ

ಪ್ರವೇಶಿಸುತ್ತಿದ್ದಂತೆಯೇ ಅದೇ ವ್ಯಕ್ತಿಯೇ ಚೆನ್ನಾಗಿ ಬಯ್ಯತೊಡಗಿದ. ಯಾತ್ರಿಕರಿಗೆಲ್ಲ ಬೆರಗಾಯಿತು.

ಅವನು ಹುಚ್ಚನಿರಬೇಕೆಂದುಕೊಂಡರು. ಅವನ ಬೇರೆ ವರ್ತನೆ ನೋಡಿದಾಗ ಅವನು ಹುಚ್ಚನಲ್ಲ ಎಂದೆನಿಸಿತು.

ಕೊನೆಗೆ ಅವರೆಲ್ಲ ಸೇರಿ ವಿಮರ್ಶಿಸಿ, ಆ ಮಣ್ಣ ದಿಬ್ಬವನ್ನು ಅಗೆದರಂತೆ ! ಏನಚ್ಚರಿ ! ಅದರ ಅಡಿಯಲ್ಲಿ ನ್ಯಾಯ-ಧರ್ಮಶೀಲನಾದ ಚಕ್ರವರ್ತಿ ವಿಕ್ರಮಾದಿತ್ಯನ ಸಿಂಹಾಸನವಿತ್ತಂತೆ !!

ಅದಕ್ಕೇ, ಆ ವ್ಯಕ್ತಿ ದಿಬ್ಬವನ್ನೇರಿ ನಿಂತಾಗ ಸ್ವಾಗತದ ಸವಿಮಾತುಗಳನ್ನಾಡಿದ. ಕೆಳಗೆ ಬಂದಾಗ ಅದಕ್ಕೆ ವಿಪರೀತವೇ !

ನಾವೂ ಅಂತೆಯೇ. ವೇದಿಕೆಯ ಮೇಲೆ ನಿಂತಾಗ ನ್ಯಾಯ, ಧರ್ಮ, ನೀತಿ, ಸತ್ಯದ ಬಗೆಗೆ ತುಂಬ ಮಾತನಾಡುತ್ತೇವೆ. ಕೆಳಗಿಳಿದಾಕ್ಷಣ ನಮ್ಮೆಲ್ಲ ಪ್ರವೃತ್ತಿಗಳೂ ಅದಕ್ಕೆ ವಿರುದ್ಧವಾಗಿಯೇ ಇರುತ್ತವೆ. ನ್ಯಾಯ ಧರ್ಮಗಳು ಕೇವಲ ಉಪನ್ಯಾಸಕ್ಕಾಗಿ ಆಚರಣೆಗಾಗಿ ಅಲ್ಲ ಎಂಬ ವರ್ತನೆ ನಮ್ಮದು.

''ನಡೆಯಲ್ಲೊಂದು ; ನುಡಿಯಲ್ಲೊಂದು''

ಇದು ನಮ್ಮ ವಿಡಂಬನೆಯ ಕತೆ.



# 'ಕುರಿ' ಯಾದ ಹುಲಿ

ಹುಲಿಯ ಮರಿಯೊಂದು ತಪ್ಪಿ ಆಕಸ್ಮಿಕವಾಗಿ ಕುರಿಗಳ ಮಂದೆಯ ನಡುವೆ ಸೇರಿಕೊಂಡಿತು ಆ ಕುರಿಗಳ ಮಧ್ಯೆ ಬೆಳೆಯುತ್ತಾ, ಆ ಹುಲಿಗೆ ತಾನು ಹುಲಿಯೆಂಬುದೇ ತಿಳಿಯಲಿಲ್ಲ ಕುರಿಗಳಂತೆ ಅದೂ "ಮೇ ಮೇ " ಎಂದು ಕಿರುಚುತ್ತಿತ್ತು ತಾನೂ ಹುಲ್ಲು ಮೇಯುತ್ತಿತ್ತು ನಾಯಿಗಳನ್ನು ಕಂಡರೆ ಬೆದರುತ್ತಿತ್ತು ಸಂಪೂರ್ಣವಾಗಿ ಹುಲಿ 'ಕುರಿ' ಯಾಗಿತ್ತು

ಒಂದು ದಿನ, ನದಿಗೆ ನೀರು ಕುಡಿಯಹೋದ ಅದು ತನ್ನ ರೂಪ ಕಂಡು, ತಾನು ತನ್ನ ಜೊತೆಗಾರರಂತಿಲ್ಲ! ಎಂದುಕೊಳ್ಳುವಾಗಲೇ, ನದಿಯ ಆಚೆ ತನ್ನಂತೆಯೇ ಇರುವ ದೊಡ್ಡ ಹುಲಿಯೊಂದನ್ನು ಕಂಡಿತು ಅದರ ಗಾಂಭೀರ್ಯ, ಹಾವಭಾವ, ನಡಿಗೆ ಎಲ್ಲ ನೋಡಿತು ಅದರ ಮೋಡದ ಗುಡುಗಿನಂತಿರುವ ಗರ್ಜನೆ ಕೇಳಿತು ಅಚ್ಚರಿಯಾಗಿ, ಅದರಂತೆಯೇ ತಾನೂ ಗರ್ಜಿಸಿತು ಏನಚ್ಚರಿ! ತಾನೂ ಆ ಹುಲಿಯಂತೆ ಗರ್ಜಿಸಬಲ್ಲೆ! ಮತ್ತೆ ಮತ್ತೆ ಗರ್ಜಿಸಿತು ಅರಣ್ಯವೆಲ್ಲ ಪ್ರತಿಧ್ವನಿಸುವ ತನ್ನ ಗರ್ಜನೆ ಕೇಳಿ ತಾನೇ ಪುಳಕಗೊಂಡಿತು

ಆ ಹುಲಿ ತಾನೂ 'ಹುಲಿ' ಎಂಬುದನ್ನು ಮನಗಂಡು ಕುರಿಗಳ ಮಂದೆ ಬಿಟ್ಟು ಕಾಡಿನತ್ತ ನಾಗಿತು

ನಮ್ಮದೂ 'ಕುರಿ' ಯಾದ ಹುಲಿಯ ಕತೆಯೇ!

ಈ ಸಂಸಾರದ ಭೌತವಸ್ತುಗಳ ನಡುವೆ ಬೆರೆತು ನಾವು ನಮ್ಮನ್ನೇ ತಿಳಿದಿಲ್ಲ 'ನಮ್ಮತನ' ಕಳೆದುಕೊಂಡಿದ್ದೇವೆ ಅಜ್ಞಾನದಿಂದ 'ಮೇ ಮೇ ' (ನನ್ನದು ನನಗೆ ) ಎಂದೆಲ್ಲ ಮಮಕಾರ ಬೆಳೆಸಿಕೊಂಡಿದ್ದೇವೆ ನಮ್ಮ ನಡೆ-ನುಡಿಗಳಲ್ಲೆಲ್ಲ ಜಡತೆ ತುಂಬಿ ಹೋಗಿದೆ

ಆಗ ವೇದದ ಉಪದೇಶವನ್ನು ಗುರುಗಳಿಂದ ಪಡೆಯಬೇಕು.

''ಸ ಆತ್ಮಾ ತತ್ವಮಸಿ...''.

ನಾವೂ ಆ ಭಗವಂತನಂತೆ ಜ್ಞಾನಾನಂದಮಯ ಎನ್ನುವುದನ್ನು ಮನಗಾಣಬೇಕು. ನಮ್ಮ ಮಮಕಾರ ತೊರೆದು ಭಗವಂತನ ಬಳಿ ಸಾಗಬೇಕು. ಆದರೆ ನಾವು ಭಗವಂತನಲ್ಲ; ಭಗವಂತನಂತೆ ಸ್ವತಂತ್ರರೂ ಅಲ್ಲ; ಭಗವಂತನ ಅಧೀನರು ಎಂಬುದನ್ನು ತಿಳಿಯಬೇಕು.

ನಾವು 'ಕುರಿ'ಗಳಲ್ಲ; 'ಹುಲಿ'ಗಳು!



# ಲೋಕಾಃ ಸಮಸ್ತಾಃ ಸುಖಿನೋ ಭವಂತು

ಗುರುಗಳು ಶಿಷ್ಯನಿಗೆ ಹೇಳಿದರು

''ಲೋಕಾಃ ಸಮಸ್ತಾಃ ಸುಖಿನೋ ಭವಂತು''

'ಜಗದೆಲ್ಲ ಜನರು ಸುಖವಾಗಿರಲಿ' ಇದು ನಮ್ಮ ಮನದ ಕಾಮನೆಯಾಗಿರಬೇಕು

ಶಿಷ್ಯ ಕೇಳಿದ

''ಗುರುಗಳೆ! 'ಸಜ್ಜನರು ಸುಖವಾಗಿರಲಿ' ಎನ್ನುವುದೇನೋ ಸರಿ! ಆದರೆ, ದುರ್ಜನರಿಗೂ ಹಾಗೆಂದೇ ಬಯಸುವುದು ಸರಿಯೆ?''

ಗುರುಗಳು ನಂತರ ಉತ್ತರ ನೀಡುವುದಾಗಿ ತಿಳಿಸಿ ಸುಮ್ಮನಾದರು ಗುರು-ಶಿಷ್ಯರಿಬ್ಬರೂ ನಡೆಯುತ್ತ ದಾರಿಯಲ್ಲಿ ಸಾಗುತ್ತಿದ್ದರು ಕತ್ತಲಾಗುತ್ತಿತ್ತು ಗುರುಗಳ ಕೈಯಲ್ಲಿದ್ದ ರತ್ನಗಳ ಗಂಟೊಂದು ಕೆಳಗೆ ಬಿತ್ತು ರತ್ನಗಳೆಲ್ಲ ಚೆಲ್ಲಾಪಿಲ್ಲಿಯಾದವು ಶಿಷ್ಯ ತಕ್ಷಣ ಕೆಳಗಿದ್ದ ಕಲ್ಲು-ಮಣ್ಣನ್ನೆಲ್ಲ ಹೆಕ್ಕಿ ಉಡಿಯಲ್ಲಿ ತುಂಬಿಕೊಂಡ ಗುರುಗಳು ಕೇಳಿದರು

''ಅಯ್ಯಾ! ರತ್ನಗಳನ್ನು ಮಾತ್ರ ಆರಿಸದೇ, ಕಲ್ಲು-ಮಣ್ಣನ್ನೆಲ್ಲ ಏಕೆ ತುಂಬಿಕೊಂಡೆ?''

ಶಿಷ್ಯ ಉತ್ತರಿಸಿದ

''ಗುರುಗಳೇ! ಈಗ ಕತ್ತಲೆಯಾಗಿದೆ ರತ್ನಗಳನ್ನು ಮಾತ್ರ ಆರಿಸುವುದು ಕಷ್ಟ ಆದುದರಿಂದ ಈಗ ಎಲ್ಲ ತುಂಬಿಕೊಂಡು, ನಾಳೆ ಬೆಳಕಿನಲ್ಲಿ ಎಲ್ಲ ರತ್ನಗಳನ್ನು ಆರಿಸಿದರಾಯ್ತು '' ಎಂದ

''ಹಾಗೆಯೇ ನೋಡು! ನಮಗೆ ಸಜ್ಜನರಾರು, ದುರ್ಜನರಾರು ಎಂದು ಗುರುತಿಸಲು ಸಾಧ್ಯವಿಲ್ಲ ಆದ್ದರಿಂದ 'ಎಲ್ಲರಿಗೂ ಸುಖವಾಗಲಿ' ಎಂದೇ ಹರಸಬೇಕು ಅಲ್ಲವೇ?''

ಗುರುಗಳು ಉತ್ತರಿಸಿದರು

''ಸರ್ವೇ ಜನಾಃ ಸುಖಿನೋ ಭವಂತು''

# ಕಲಿಯ ಸಹಾಯ

ಅವನು ನಿಷ್ಠಾವಂತ ಕರ್ಮಠ ಬ್ರಾಹ್ಮಣ ನಿತ್ಯಕರ್ಮಗಳ ಆಚರಣೆಯಲ್ಲಿ ಅವನೆಂದೂ ತಪ್ಪಿಲ್ಲ, ಎಡವಿಲ್ಲ ಸಮಯಕ್ಕೆ ಸರಿಯಾಗಿ, ಸರಿಯಾದ ರೀತಿಯಲ್ಲಿ ಅವನು ತನ್ನ ಕರ್ತವ್ಯ-ಕರ್ಮಗಳನ್ನು ಪರಿಪಾಲಿಸುತ್ತಿದ್ದ

ಹೀಗೆಯೇ ಒಂದು ದಿನ ಮಧ್ಯಾಹ್ನ ಮಲಗಿದ ಅವನಿಗೆ ಎಚ್ಚರವೇ ಇಲ್ಲ ಗಾಢವಾದ ನಿದ್ದೆ! ಸಂಜೆಯಾಯಿತು ಸಂಧ್ಯಾವಂದನೆಯ ಸಮಯ

''ಏಳಯ್ಯಾ! ಸಂಧ್ಯಾವಂದನೆಯ ಸಮಯ ಮೀರುತ್ತದೆ'' ಎನ್ನುವ ದನಿಗೆ ಅವನಿಗೆ ಎಚ್ಚರವಾಯಿತು

ತನ್ನನ್ನು ಇಷ್ಟೊಂದು ಅಭಿಮಾನದಿಂದ ಎಬ್ಬಿಸಿದವರು ಯಾರಿರಬಹುದೆಂದು ಕುತೂಹಲದಿಂದ ಆ ಬ್ರಾಹ್ಮಣ ಅತ್ತಿತ್ತ ನೋಡಿದ ಪಕ್ಕದಲ್ಲೇ ನಿಂತಿದೆ ಒಂದು ಕಪ್ಪಗಿನ ಆಕೃತಿ ಯಾರೆಂದು ವಿಚಾರಿಸಿದಾಗ ತಿಳಿಯಿತು ಅವನು ಕಲಿ ಪುರುಷ! ಬ್ರಾಹ್ಮಣನಿಗೆ ಅಚ್ಚರಿಯೋ ಅಚ್ಚರಿ!

''ಧರ್ಮ-ಕರ್ಮಗಳ ಆಚರಣೆಗೆ ತಡೆಯನ್ನೊಡ್ಡುವ ನೀನು ನನ್ನನ್ನೇಕೆ ಎಬ್ಬಿಸಿದೆ? ಸಂಧ್ಯಾವಂದನೆ ಪೂರೈಸಲು ಏಕೆ ಪ್ರೇರಿಸುತ್ತಿರುವೆ?'' ಬ್ರಾಹ್ಮಣ ಕೇಳಿದ

''ಅಯ್ಯೋ ಬ್ರಾಹ್ಮಣ! ಈಗ ಸಂಧ್ಯಾಸಮಯದಲ್ಲಿ ನಿನ್ನನ್ನು ಎಬ್ಬಿಸದೇ ಬಿಟ್ಟರೆ, ಮತ್ತೆ ನಂತರ ತಡವಾಗಿ ಎದ್ದ ನೀನು ಸಮಯ ಮೀರಿ ಹೋದುದಕ್ಕೆ ಪಶ್ಚಾತ್ತಾಪ ಪಡುತ್ತೀ ಇದರಿಂದ ನಿನಗೆ ನಿತ್ಯದ ಕರ್ಮಾಚರಣೆಗಿಂತಲೂ ಹೆಚ್ಚಿನ ಪುಣ್ಯ ಲಭಿಸುತ್ತದೆ ನಿನ್ನನ್ನು ಎಬ್ಬಿಸಿದರೆ, ನಿನಗೆ ಸಂಧ್ಯಾವಂದನೆಯ ಅನುಷ್ಠಾನದಿಂದ ಬರುವ ಪುಣ್ಯ ಮಾತ್ರ ಬರುತ್ತದೆ ಅಲ್ಲವೇ? ಅದಕ್ಕೆ ನಿನಗೆ ಹೆಚ್ಚಿನ ಪುಣ್ಯ ಬರದಿರಲಿ ಎಂದು ತನ್ನ ಉದ್ದೇಶ'' ಕಲಿ ತನ್ನ ಕಾರ್ಯ ಸಮರ್ಥಿಸಿಕೊಂಡ

ಇದು ಕಾಲ್ಪನಿಕ ಕತೆ

ಆದರೆ, 'ಪಶ್ಚಾತ್ತಾಪ'ದ ಮಹತ್ತ್ವದ ಅರಿವು ಇದರಿಂದ ಆಗುತ್ತದೆ

# ನಿಜವಾದ ಸಜ್ಜನ

ಓರ್ವ ಸಾಧು ನದಿಯಲ್ಲಿ ಸ್ನಾನ ಮಾಡುತ್ತಿದ್ದ ನದಿಯ ದಡದ ನೀರಿನಲ್ಲಿ ಚೇಳೊಂದು ನೀರಿಗೆ ಸಿಲುಕಿ ಹೊರಗೆ ಬರಲಾಗದೇ ಒದ್ದಾಡುತ್ತಿತ್ತು ಸಾಧುವಿಗೆ ಕರುಣೆ ಉಕ್ಕಿತು ಆ ಚೇಳನ್ನು ಹಿಡಿದು ಮೇಲೆತ್ತಿದ ತಕ್ಷಣ ಚೇಳು ಅವನ ಕೈಗೆ ಕುಟುಕಿತು ನೋವಿನಿಂದ ಚೇಳನ್ನು ಕೆಳಗೆ ಬಿಟ್ಟ ಮತ್ತೆ ಚೇಳು ನೀರಿನಲ್ಲಿ ಬಿದ್ದು ಚಡಪಡಿಸತೊಡಗಿತು ಸಾಧು ಕರುಣೆಯಿಂದ ಮತ್ತೆ ಆ ಚೇಳನ್ನು ಮೇಲಕ್ಕೆತ್ತಿದ ಚೇಳಿನ ಸ್ವಭಾವ! ಮತ್ತೆ ಕಚ್ಚಿತು ನೋವಿನಿಂದಾಗಿ ಕೈ ತಪ್ಪಿ ಮತ್ತೆ ಚೇಳು ನೀರಿನಲ್ಲಿ ಮತ್ತೆ ಸಾಧು ಎತ್ತಲು ಪ್ರಯತ್ನಿಸಿದ ಆಗಲೂ ಹಾಗೆಯೇ ಆಯಿತು ಸಾಧು ಆ ಚೇಳನ್ನು ಮೇಲೆತ್ತಲು ಪ್ರಯತ್ನಿಸುತ್ತಲೇ ಇದ್ದ

ಅದನ್ನು ಕಂಡ ವ್ಯಕ್ತಿಯೋರ್ವ ತುಂಬ ಅಚ್ಚರಿಯಿಂದ ಸಾಧುವಿನ ಬಳಿ ಹೋಗಿ ಕೇಳಿದ ''ಅದು ಕಚ್ಚುವುದನ್ನು ಬಿಡಲಾರದು , ನೀವೇಕೆ ಅದನ್ನು ಮೇಲೆತ್ತಲು ಮತ್ತೆ ಮತ್ತೆ ಪ್ರಯತ್ನಿಸುವಿರಿ?'' ಸಾಧು ಹಸನ್ಮುಖನಾಗಿ ಹೇಳಿದ

''ಈ ಚೇಳು ಕಚ್ಚುವುದೆಂದು, ನಾನೂ ನಿರ್ದಯನಾದರೆ, ನನಗೂ, ಈ ಚೇಳಿಗೂ ಏನು ವ್ಯತ್ಯಾಸ? ಕಚ್ಚುವುದು ಚೇಳಿನ ಸ್ವಭಾವವಲ್ಲವೇ? ಹಾಗೆಂದು ನಾನು ಅದನ್ನು ರಕ್ಷಿಸದೇ ಹೇಗೆ ಬಿಡಲಿ?''

ಹೌದು! ನಾವು ಕರ್ತವ್ಯವೆಂದು ಬಗೆದು ಪರೋಪಕಾರವನ್ನು ಮಾಡುತ್ತಿರಬೇಕು ಅದಕ್ಕೆ ಪ್ರತಿಯಾಗಿ ಪರರಿಂದ ಯಾವ ಪ್ರತಿಕ್ರಿಯೆಯನ್ನೂ ಬಯಸಬಾರದು ಕೆಲವೊಮ್ಮೆ ಪ್ರತಿರೋಧದ ಪ್ರತಿಕ್ರಿಯೆ ಬಂದರೂ, ಅದಕ್ಕೆ ಚಿಂತಿಸದೇ, ನಮ್ಮ ಕರ್ತವ್ಯದಲ್ಲಿ ತೊಡಗಬೇಕು

ಶತ್ರುಗಳಿಗೂ ಹಿತ ಬಯಸುವವನೇ ನಿಜವಾದ ಸಜ್ಜನ!

# ‘ನಿಜ’ವೆಲ್ಲ ಸತ್ಯವಲ್ಲ

ಕಾಡಿನ ಏಕಾಂತ ಪ್ರದೇಶದ ಪರ್ಣಕುಟೀರದಲ್ಲಿ ತಪಗೈಯ್ಯುವ ಆ ಋಷಿ ತುಂಬ ಸತ್ಯ ನಿಷ್ಠ! ಅವನ ಸತ್ಯದ ದೀಕ್ಷೆ ಅಚಲವಾದದ್ದು ಒಂದು ದಿನ ಮರದಡಿಯಲ್ಲಿ ಧ್ಯಾನಮಗ್ನನಾದ ಅವನ ಬಳಿಗೆ ಹಳ್ಳಿಯ ಜನರ ಗುಂಪೊಂದು ಓಡೋಡಿ ಬಂದಿತು ಆನರೆ ಬೇಡಿತು ಆ ಋಷಿಯ ಆಶ್ರಮದ ಹಿಂಭಾಗದಲ್ಲಿ ಅಡಗಿ ಕುಳಿತುಕೊಂಡಿತು ಇತ್ತ ಋಷಿ ಮತ್ತೆ ಧ್ಯಾನಮಗ್ನನಾಗುವಷ್ಟರಲ್ಲಿ, ಕೈಯ್ಯಲ್ಲಿ ದೊಣ್ಣೆ ಕತ್ತಿ, ಮಚ್ಚುಗಳನ್ನು ಹಿಡಿದ ದರೋಡೆಕೋರರ ದೊಡ್ಡ ಗುಂಪು ಋಷಿಯ ಬಳಿ ಬಂದಿತು ಆ ದರೋಡೆಕೋರರು ಋಷಿಯನ್ನು ಸ್ವಲ್ಪ ಹೊತ್ತಿನ ಮುಂಚೆ ಬಂದ ಹಳ್ಳಿಗರ ಗುಂಪು ಎತ್ತ ಹೋಯಿತೆಂದು ಕೇಳಿದರು

ಋಷಿ ಸತ್ಯನಿಷ್ಠ ! ನಿಜವನ್ನೇ ಹೇಳಿದ ಹಳ್ಳಿಗರು ಅಡಗಿದ ತಾಣವನ್ನು ಆ ದರೋಡೆಕೋರರಿಗೆ ತೋರಿಸಿದ ಆ ದರೋಡೆಕೋರರು ಹಳ್ಳಿಗರನ್ನು ಹಿಡಿದು ಬಡಿದರು ಅವರ ಹಣ- ಒಡವೆ- ವಸ್ತ್ರಗಳನ್ನು ಲೂಟಿ ಮಾಡಿದರು ಎಲ್ಲ ಕೊಳ್ಳೆ ಹೊಡೆದು ಓಡಿ ಹೋದರು

ಇದು ಋಷಿ ಹೇಳಿದ ‘ನಿಜ’ ದ ಪರಿಣಾಮ !

ಋಷಿ ‘ನಿಜ’ ಹೇಳಿದ್ದ, ಆದರೆ ‘ಸತ್ಯ’ವನ್ನಲ್ಲ!!

‘ನಿಜ’ವೆಲ್ಲಾ ಸತ್ಯವಲ್ಲ! ಸಜ್ಜನರಿಗೆ ಹಿತವಾಗುವ ‘ಸುಳ್ಳೂ’ ಸತ್ಯ!!

ಸಜ್ಜನರಿಗೆ ಹಿತವಾಗದ ಸತ್ಯವೂ ಸುಳ್ಳು !!



‘‘ ಯತ್ ಸತಾಂ ಹಿತಮತ್ಯಂತಂ ತತ್ ಸತ್ಯಮ್ ’’

ಸಜ್ಜನರಿಗೆ ಹಿತವಾಗುವುದೆಲ್ಲ ಸತ್ಯ .

ಶ್ರೀಮದಾನಂದತೀರ್ಥಭಗವತ್ಪಾದರು.

# ಒಂಟೆಯ ಬಾಯಲ್ಲಿ ದೇವರು

ರಣರಣ ಬಿಸಿಲು , ಸುಡುವ ಮರಳರಾಶಿ , ಮರಗಳಿಲ್ಲದ ಮರುಭೂಮಿ, ನೆರಳಿಲ್ಲದ ದಾರಿ ! ನೀರಿಲ್ಲದೇ ನಿತ್ರಾಣವಾಗಿ ಮಲಗಿದ ಆ ಒಂಟೆಯ ಕಂಡು ಎಲ್ಲರೂ ಮರಗುವವರೇ ! ನೂರಾರು ಜನ ಯಾತ್ರಿಕರು ಉತ್ತರದ ಯಾತ್ರೆ ಮುಗಿಸಿ ತಮ್ಮೂರಿಗೆ ಹಿಂದಿರುಗುತ್ತಿದ್ದಾರೆ ಒಬ್ಬೊಬ್ಬರೂ ಹೆಗಲ ಮೇಲೆ ಗಂಗೆಯ ನೀರು ತುಂಬಿಸಿದ ಕೊಡಗಳನ್ನು ಹಿಡಿದಿದ್ದಾರೆ ನೀರಿಗಾಗಿ ಪರಿತಪಿಸುತ್ತ ಕಾತರಿಸುತ್ತ ಒದ್ದಿರುವ ಒಂಟೆಯ ಕಂಡು '' ಅಯ್ಯೋ ಪಾಪ !'' ಎಂದು ಕನಿಕರ ತೋರಿದರೇ ಹೊರತು, ಒಂದು ಬೊಗಸೆ ನೀರು ಹನಿಸಲಿಲ್ಲ!

ಒಬ್ಬ ಯಾತ್ರಿಕ ಒಂಟೆಯ ಸ್ಥಿತಿ ನೋಡಿದ ಹಿಂದು ಮುಂದು ನೋಡದೆ ತನ್ನ ಗಂಗಾಕಲಶವನ್ನು ಒಡೆದ ಒಂಟೆಯ ಬಾಯಿಗೆ ನೀರು ಬಡಿಸಿದ !

ಸಹಯಾತ್ರಿಕರು ಅವನ ಈ ಕಾರ್ಯ ನೋಡಿ ಹಣೆ ಚಚ್ಚಿಕೊಂಡರು ಕಷ್ಟಪಟ್ಟು ತಂದ ಗಂಗೆಯ ನೀರನ್ನು ದಕ್ಷಿಣದ ರಾಮೇಶ್ವರನಿಗೆ ಅಭಿಷೇಕ ಮಾಡಿ ಪುಣ್ಯ ಗಳಿಸದೇ, ಒಂಟೆಯ ಬಾಯಿಗೆ ಹೊಯ್ದು ವ್ಯರ್ಥ ಮಾಡಿದ! ಎಂಥ ದಡ್ಡ !! ಎಂದುಕೊಂಡರು

ಒಂಟೆಗೆ ನೀರು ಹಾಕಿಸಿದ ಆ ಯಾತ್ರಿಕ, ಒಂಟೆಯ ಒಡಲಲ್ಲೇ ರಾಮೇಶ್ವರವನ್ನು ಕಂಡ ! ಪರಮೇಶ್ವರ ಅಲ್ಲಿಯೇ ಇದ್ದು ಆ ಭಕ್ತನ ಸೇವೆ ಸ್ವೀಕರಿಸಿ, ಅನುಗ್ರಹಿಸಿದ !!

ದೇವರು ಬೇರೆಲ್ಲೂ ಇಲ್ಲ , ನಮ್ಮ ಕಣ್ಣೆದುರೇ, ಎಲ್ಲ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ ನೆಲೆಸಿದ್ದಾನೆ ನಾವು ಪ್ರಾಣಿಗಳಲ್ಲಿ ತೋರುವ ಪ್ರೀತಿ- ದಯೆಯಿಂದ ಅವನು ಪ್ರೀತನಾಗುತ್ತಾನೆ

'' ಪ್ರಾಣ್ಯುಪಕಾರೇಣ ಪ್ರೀತೋ ಭವತಿ ಕೇಶವಃ ''

# ದುರ್ವಾಸನೆ

ಅರಮನೆಗೆ ಬಂದ ಆ ದೊಡ್ಡ ಯೋಗಿಗಳನ್ನು ತನ್ನ ಅರಮನೆಯಲ್ಲೇ ಇರಿಸಿಕೊಳ್ಳಲು ರಾಜನಿಗೆ ಬಲು ಆಸೆ ಆದರೆ, ಆ ಯೋಗಿಗಳು ಒಪ್ಪಲಿಲ್ಲ

''ರಾಜನ್! ನಿನ್ನ ಅರಮನೆಯ ದುರ್ವಾಸನೆಯನ್ನು ನನಗೆ ಸಹಿಸಲಾಗುತ್ತಿಲ್ಲ'' ಎಂದರು

ರಾಜನಿಗೆ ಅಚ್ಚರಿ! ಇಷ್ಟು ಶುದ್ಧವಾದ, ಸುಗಂಧ ದ್ರವ್ಯಗಳಿಂದ ಸುಗಂಧಮಯವಾದ ಅರಮನೆಯಲ್ಲಿ ದುರ್ವಾಸನೆ ಎಲ್ಲಿಂದ? ಅಲ್ಲದೇ, ತನಗೆ ಅನುಭವಕ್ಕೆ ಬಾರದ ಈ ದುರ್ವಾಸನೆ ಯಾವುದು? ಯೋಗಿಗಳು ನಕ್ಕು, ರಾಜನನ್ನು ತಮ್ಮೊಂದಿಗೆ ಕರೆದೊಯ್ದರು ಚಮ್ಮಾರರ ಬೀದಿಯೊಳಗೆ ನಾಗಿದರು ಹಿಂಬಾಲಿಸಿದ ರಾಜನೂ ಅಲ್ಲಿ ಕಾಲಿಡುತ್ತಿದ್ದಂತೆಯೇ ಮೂಗಿಗೆ ಬಡಿಯುತ್ತಿದ್ದ ದುರ್ವಾಸನೆ ತಡೆಯಲಾರದೇ ನಿಂತುಬಿಟ್ಟ ಯೋಗಿಗಳು ಕೇಳಿದರು

''ಏಕೆ? ಅಲ್ಲಿಯೇ ನಿಂತೆ?''

''ಯೋಗಿಗಳೇ, ತುಂಬ ದುರ್ವಾಸನ? ಹೇಗೆ ಬರಲಿ?''

''ಇಲ್ಲಿ ಇಂತಹ ವಾತಾವರಣದಲ್ಲಿ ಚಮ್ಮಾರರು ಬದುಕಿಲ್ಲವೆ?''

''ಆದರೆ, ಅವರಿಗೆ ಈ ದುರ್ವಾಸನೆ ಒಗ್ಗಿ ಹೋಗಿದೆ ''

''ಹಾಗೆಯೇ, ನಿನ್ನ ಅರಮನೆಯ ತುಂಬ ವಿಷಯ ಪದಾರ್ಥಗಳ ದುರ್ವಾಸನೆ ತುಂಬಿ ಹೋಗಿದೆ ಅದು ನಿನಗೂ ಒಗ್ಗಿಹೋಗಿದೆ ಅವುಗಳ ನಡುವೆಯೇ ಸದಾ ಬದುಕುತ್ತಿರುವ ನಿನಗೆ ಅದು ತಿಳಿಯುತ್ತಿಲ್ಲ ವಿಷಯ ಪದಾರ್ಥಗಳಿಂದ ದೂರವಿರುವ ನಮಗೆ ಅದರ ದುರ್ವಾಸನೆ ಸಹಿಸಲಾಗದು ''

ಅಂತೆಯೇ ನಾವು ಈ ಸಂಸಾರದ ವಿಷಯ ಸುಖದ ದುರ್ವಾಸನೆಯಲ್ಲಿಯೇ ಇದ್ದರೂ ಅದಕ್ಕೆ ಒಗ್ಗಿಕೊಂಡು ಬಿಟ್ಟಿದ್ದೇವೆ ಇದೇ ಸುಗಂಧ ಎಂದೇ ಬಗೆದಿದ್ದೇವೆ

# ಕೊನೆಗಾಲದ ನೆನಪು

ಅವನು ಹಾಸಿಗೆಯಲ್ಲಿ ಮಲಗಿದ್ದಾನೆ ಸುತ್ತ ಬಂಧು ಜನರು ನೆರೆದಿದ್ದಾರೆ ''ಪಾಪ!'' ಎನ್ನುತ್ತಿದ್ದಾರೆ ''ಅಂತಿಮ ಆಸೆ ಈಡೇರಿಸಿಬಿಡಿ'' ಹಾಸಿಗೆಯ ಬಳಿ ಕುಳಿತ ಮಗನಿಗೆ ಹೇಳುತ್ತಿದ್ದಾರೆ ಎಲ್ಲರೂ ಆ ವ್ಯಕ್ತಿಯ ಕೊನೆಯುಸಿರಿನ ಕ್ಷಣಕ್ಕೆ ಕಾಯುತ್ತಿದ್ದಾರೆ

ಅಷ್ಟು ಹೊತ್ತಿಗೆ, ಆ ಮುದುಕ ಅಪ್ಪ ಮೆಲ್ಲನೆ ಕಣ್ತೆರೆದ ಎಲ್ಲರಿಗೂ ಕುತೂಹಲ ಮೆಲ್ಲನೆ ಏನೋ ಕೈ ಮಾಡಿದ ಕೈಯೆತ್ತಿ ಏನನ್ನೋ ತೋರಿಸಿ ಸನ್ನೆ ಮಾಡಿದ ಯಾರಿಗೂ ಏನೊಂದೂ ಅರ್ಥವಾಗಲಿಲ್ಲ ಮಗ ಹತ್ತಿರ ಬಂದು ಕಿವಿಯೊಡ್ಡಿದ ಆ ವ್ಯಕ್ತಿಗೆ ಏನೂ ಹೇಳಲಾಗಲಿಲ್ಲ ಆದರೆ ಏನನ್ನೋ ಹೇಳಲು ತವಕಿಸುತ್ತಿರುವುದು ಸ್ಪಷ್ಟವಾಗಿತ್ತು ಕೊನೆಗೆ ಕೈಸನ್ನೆ ಮಾಡಿ ಮಗನಿಗೆ ಏನೋ ಹೇಳಿದ ಮಗನಿಗೆ ತಕ್ಷಣ ಅರ್ಥವಾಯಿತು ಕೋಣೆಯಲ್ಲಿ ಉರಿಯುತ್ತಿದ್ದ ದೀಪವನ್ನು ಆದಷ್ಟು ಚಿಕ್ಕದಾಗಿ ಉರಿಸಲು ಆ ಮುದುಕ ಹೇಳುತ್ತಿದ್ದ ದೊಡ್ಡದಾಗಿ ಉರಿಯುವ ದೀಪದಿಂದ ಎಣ್ಣೆ ಹೆಚ್ಚು ಖರ್ಚಾಗುವುದೆಂಬ ಭೀತಿ ಆ ಲೋಭಿ ಮುದುಕನಿಗೆ!

ಅದೇ ಅವನ ಕೊನೆಯ ಮಾತು ಮರುಕ್ಷಣ ಆ ಮುದುಕ ಕೊನೆಯುಸಿರು ಎಳೆದಿದ್ದ

ಮನುಷ್ಯ ಇಡಿಯ ಬದುಕಿನಲ್ಲಿ ಯಾವುದರ ಬಗೆಗೆ ಹಗಲಿರುಳು ಚಿಂತನೆ ನಡೆಸುವನೋ, ಕೊನೆಯ ಗಳಿಗೆಯಲ್ಲೂ ಅವನಿಗೆ ಅದೇ ನೆನಪಿಗೆ ಬರುವುದು ಬದುಕಿನುದ್ದಕ್ಕೂ ನಾವು ಗಳಿಸಿದ ಸಂಸ್ಕಾರಗಳು ಕೊನೆಗಾಲ ದಲ್ಲಿ ಮಹತ್ತ್ವದ್ದಾಗುತ್ತವೆ

ಆದ್ದರಿಂದ, ಭಗವಚ್ಚಿಂತನೆಯನ್ನು ಕೊನೆಗಾಲದಲ್ಲಿ ನಡೆಸ ಬೇಕಾದರೆ, ಜೀವನವಿಡೀ ಅದನ್ನು ಅಭ್ಯಸಿಸಬೇಕಾಗುತ್ತದೆ ಅದಕ್ಕಾಗಿ ನಿರಂತರ ಪ್ರಯತ್ನ ನಡೆಯಬೇಕು

**ಸಂತತಂ ಚಿಂತಯೇನಂತಂ ಅಂತಕಾಲೇ ವಿಶೇಷತಃ**



ಕೃಷ್ಣಂ ವಂದೇ ಮಂಥಪಾಶಧರಂ ದಿವ್ಯಾರ್ಭಕಾಕೃತಿಮ್।
ಶಿಖಾಬಂಧತ್ರಯೋಪೇತಂ ಭೈಷ್ಮೀ ಮಧ್ವಕರಾರ್ಚಿತಮ್॥



ನಮ್ಮ ಆತ್ಮವಿಕಾಸಕ್ಕಾಗಿ ಜೀವನ ಪೂರ್ತಿ ಆಧ್ಯಾತ್ಮಿಕ ವಿದ್ಯಾಭ್ಯಾಸವನ್ನೇ ನಡೆಸಬೇಕು. ಆದರೆ ಕಾಲದ ಮಹಿಮೆಯಿಂದ ಅದು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಲೌಕಿಕ ವಿದ್ಯಾಭ್ಯಾಸದ ಜೊತೆಗಾದರೂ ಆಧ್ಯಾತ್ಮಿಕ ವಿದ್ಯಾಭ್ಯಾಸವನ್ನು ನಡೆಸಲೇಬೇಕು.

ಶುದ್ಧಹಾಲನ್ನೇ ಕುಡಿಯಬೇಕು. ಆದರೆ ಶುದ್ಧ ಹಾಲು ದೊರಕುವುದಿಲ್ಲ. ಅಂದಮಾತ್ರಕ್ಕೆ ಹಾಲನ್ನೇ ಬಿಟ್ಟಡುವುದಿಲ್ಲ. ನೀರಿನಿಂದ ಮಿಶ್ರಿತವಾದ ಹಾಲನ್ನಾದರೂ ಕುಡಿಯುತ್ತೇವೆ ಅಲ್ಲವೇ!